**ಮಂಗಳಂ ಜಯ ಜಯತು** **ರಾಗ:ಮುಖಾರಿ, ಛಾಪುತಾಳ**

ಮಂಗಳಂ ಜಯ ಜಯತು॥ಪ॥ ಕರಿಗೊರಳವನಿಗೆ। ಕರಿಗೊಲಿದವಗೆ। ಕರಿಮುಖನಯ್ಯಗೆ। ಕರಿಯ ಮಯ್ಯವಗೆ॥1॥ ದಶಭುಜದವಗೆ। ದಶಪತಿಧ್ವಜಗೆ। ದಶಶಿರಗೊಲಿದಗೆ। ದಶರಥಸುತಗೆ॥2॥ ಶಂಕರಿ ರಮಣಗೆ। ಸಂಕರುಷಣಗೆ। ಶಂಕರನಾರಾಯಣ ಶ್ರೀ ವೆಂಕಟರಮಣಗೆ॥3॥

**ಲೀಲಾವಿನೋದನಿಗೆ ಬಾಲೇಂದು** **ರಾಗ:ಭೈರವಿ**

ಲೀಲಾವಿನೋದನಿಗೆ ಬಾಲೇಂದು ಫಾಲನಿಗೆ। ಕಾಲಕಾಲಾತೀತ ಮಾದೇವಗೆ। ಹಾಲಹಲವಧರಿಸಿ ಸುರಜಾಲವನು ಪೊರೆದ। ಮೂರ್ಲೋಕದೊಡೆಯನಿಗೆ ಮಾಲೋಲಗೇ॥ ಜಯಮಂಗಳಂ ನಿತ್ಯ ಶುಭಮಂಗಳಂ॥1॥ ದುರಿತ ಸಂಹಾರನಿಗೆ ಸುರಪತಿಯ ಸೇವ್ಯನಿಗೆ। ಹರುಷದೊಳು ಮನ್ನಿಸುತ ಪೊರೆದ ಪುರಹರಗೆ। ನಿರುತದಲಿ ಸ್ಮರಿಪರನು ತ್ವರಿತದಿಂ ಪಾಲಿಸುವ। ಭರಿತ ಚಿನ್ಮಯರೂಪ ಪರಮಾತ್ಮಗೇ॥ ಜಯಮಂಗಳಂ ನಿತ್ಯ ಶುಭಮಂಗಳಂ॥2॥

**ಹೃದಯದಲಿ ವಾಸನಿಗೆ** **ರಾಗ:ಶಂಕರಾಭರಣನೋಟ್ಸ್**

ಹೃದಯದಲಿ ವಾಸನಿಗೆ। ದುರಿತ ನಿವಾರಣಗೆ। ಮದಅಷ್ಟ ಅಳಿದವಗೆ। ಮಹದೇವಗೇ। ಪದವಾಕ್ಯ ದಾತನಿಗೆ। ಪಾಶಧರ ಸೂತ್ರನಿಗೆ। ಮಧುರ ವಚನದ ಚೆಲ್ವ। ಭೀಮೇಶಗೆ। ಜಯ ಮಂಗಳಂ ನಿತ್ಯ ಶುಭಮಂಗಳಂ॥1॥ ಪಾಪ ನಿರ್ಲೇಪನಿಗೆ। ಪ್ರಣವ ಸ್ವರೂಪನಿಗೆ। ತಾಪತ್ರ ಲೋಭನಿಗೆ। ಜಗಜ್ವಾಲೆಗೆ ಶಾಪ ನಿಶ್ಯಾಪನಿಗೆ। ಶಬರೈಕ ದೀಪನಿಗೆ। ಶ್ರೀಪರಮಾತ್ಮ ಶಿವ। ಭೀಮೇಶಗೇ॥2॥ ಓಂಕಾರ ರೂಪನಿಗೆ। ವೈಭವ ಚರಿತ್ರನಿಗೆ। ಓಂಕಾರ ಗಾತ್ರನಿಗೆ। ಕೃತನೇತ್ರಗೇ ಪಂಕಜ ಪವಿತ್ರನಿಗೆ। ಪಾಶುಧರ ಸೂತ್ರನಿಗೆ। ಶಂಕರಗೆ ಸರ್ವಾ। ಅಭಯಂಕರನಿಗೇ॥3॥

# ಶ್ರೀ ಗುರುಸ್ತುತಿ

## ನಾರದ

**ಎಂಥಾ ಮಹಿಮ ನೋಡಿರೋ (ದೇವರನಾಮ)** **ರಾಗ: ಮೋಹನ, ಆದಿತಾಳ**

ಎಂಥಾ ಮಹಿಮ ನೋಡಿರೋ। ನಾರದಮುನಿ। ಪಂಥವ ಪೊಂದಿ ಬದುಕಿರೋ॥ಪ॥ ಎಂಥಾ ಮಹಿಮನಮ್ಮ ಪ್ರಾಂತಾದೊಳಾದ್ಯಾತ್ಮ। ಕ್ರಾಂತೀ ಎಬ್ಬಿಸಿ ಮಿಥ್ಯದ್ವಾಂತಾ ಧ್ವಂಸಕನಾದ॥ಅ.ಪ॥ ಪಾಮರರನ್ನು ಪೊರೆವ। ಉದ್ದೇಶಾರ್ಥ। ಕಾಮನಯ್ಯನ ವರವ ನೇಮದಿ ಸ್ವೀಕರಿಸಿ। ಭೀಮಾರಥಿಯತೀರ। ಸೋಮಾಧಿಪತಿಘಡ। ನಾಮಾ ನಗರಿಯಲೀ॥ ಕಾಮಲೋಭಗಳ ಧಾಮನೆನಿಸಿ ಹರಿ-ತಾಮರಸಾಂಘ್ರಿಯ ಪ್ರೇಮದಿ ನೆನೆಯದ ತಾ ಮೈ ಮರೆದಿರೆ ಭಾಮಾವರ ಮನ। ತಾಮಸ ಹರಿಸಲು ತಾ ಮುದವಾಂತ॥1॥ ಪಾಂಡುರಂಗನ ಚರಿಯ। ಸ್ಮರಿಸಿ ವಿದ್ವನ್ಮಂಡಲಿಯೊಳು ಹಿರಿಯ। ಗಂಡುಗಲಿ ವೇದಾಂತ। ಮಾಂಡಲೀಕನು ತರ್ಕ ತಾಂಡವಾರ್ಯನ ಪಾದ। ಪುಂಡರೀಕದ್ವಯ। ಬಂಡುಣಿ ಅಂಕಿತ। ಕೊಂಡು ವಿಜ್ಞಾನ ಕ। ರಂಡವೆನಿಸಿ ಹೃ। ನ್ಮಂಡಲಸ್ಥಿತ ಹರಿ॥ ಕಂಡು ಮಧ್ವಾಗಮಾ। ಖಂಡಾಮೃತ ರಸ। ಉಂಡು ಜೀರ್ಣಿಸಿದ। ತೊಂಡ್ರಾಗ್ರೇಸರ॥2॥ ಸಕಲ ವೈದಿಕ ಲೌಕಿಕ ಕರ್ಮವು ನಿಷ್ಕಾಮಕವಾಗಲವು ಸಾರ್ಥಕ। ಅಕಟಾ ಈ ರಹಸ್ಯ। ಪ್ರಕರಣ ತಿಳಿಯದೆ। ಮಕಮಾರಿ ಪಾಂಡಿತ್ಯ। ಕಕುಲಾತೆಯಿಂದಲೀ। ಸುಖವರಿಯದೆ ಜನ। ವಿಕಲಮತಿಯ ದುರ್ಮುಖಿಗಳಾಗೆ ಬಂ। ಧಕವ ಕಳೆದು ಹೃನ್ಮುಕರ ಮಧ್ಯ ತಾರಕನ ಕಾಂಬ ಪರಿ ಸುಖತೀರ್ಥರ ಮತ। ಪ್ರಕಟಣೆ ಮಾಡಿದ॥3॥ ಸುಲಭ ಮುಕ್ತಿಯ ಸಾರುವ। ಆಧ್ಯಾತ್ಮದ ಒಲವು ಭಕ್ತಿಗೆ ಬರುವ। ಸುಲಲಿತ ಸಾಹಿತ್ಯ। ಪಳಿವಾತಿನಲಿ ಕರ್ಮ। ಕೊಳೆಯ ಸಂಕೀರ್ತನ ಜಲದಿ ನಿರ್ಮಲಗೈದು॥ ಮಲೆತ ಮಾಯ್ಗಳಭಿ ಕಲಿತವಾದಾರ್ಥವ ಒಲುಮೆಯಿಂದಲಿ ದಲವಭೋಧಮತ। ಜಲಧಿ

ಮಂಥನದಿ ತಳೆದ ಸುಧಾರಸ। ವಿಳೆಯ ವಿಭುಧ ಗಣ ಕೊಲಿದುಗೆಲಿಸಿದ॥4॥ ದ್ವಂದ್ವಾರ್ಪಣೆಯ ಕ್ರಮವ। ನಿತ್ಯಾನು ಸಂಧಾನದೊಳು ತರುವ॥ ಬಂಧುರದಾಧ್ಯಾತ್ಮ ಸಂದೇಶ ದೃಷ್ಟಾಂತ। ದಿಂದ ತೋರಿದ ಜ್ಞಾನಿ ಸಂದೋಹ ಮೆಚ್ಚಲು॥ ನಿಂದು ಕುಣಿವ ಕುಳಿತಂದಾಡುವ ಬಹ ನಿಂದೆ ಸ್ತೋತ್ರ ಮನಸಿಂದಾಗುವ ಜ್ಞಾನೇಂದ್ರಿಯ ಕರ್ಮದ। ಗಂಧರೂಪ ರಸ। ಬಂದು ಪೋದುದ್ಧರಿಯಿಂದೆನ್ನುವ ಗುರು॥5॥ ಬಿಂಬ ಕ್ರಿಯದ ಭಾವವ ತಿಳಿದು ಹರಿಯ। ಡಿಂಬದೊಳಗೆ ಕಾಂಬುವ। ಸಂಭ್ರಮವೇನೆಂಬೆ ನಂಬಿ ಧ್ಯಾನಿಪರ ಹೃದಂಬರದಲಿ ಬಿಂಬ। ನಿಂಬುಗೊಳ್ಳುವ ನೆಂದು॥ ಕುಂಭಿಣಿಯೊಳು ಪ। ದ್ಮಾಂಬರನಂಕಿತ ವೆಂಬ ಪ್ರಕ್ರಿಯಾ। ರಂಭಿಸಿ ಶುದ್ಧ ಕುಟುಂಬಿಗರಿಗೆ ಜ್ಞಾ। ನಾಂಬಕ ತೆರೆದ ಕೈ। ತಂಬೂರಿ ತುಳ। ಸ್ಯಾಂಬಕಿಗಳದ॥6॥ ದಾಸನಾಗುವ ಭಾಗ್ಯಕೆ ಮಿಗಿಲಿಲ್ಲ ಸನ್ಯಾಸಾದಿ ಶ್ರಮವೇತಕೆ। ಏನೇನು ಬಂದರು ದಾಸೀನನಾಗಿ ಸರ್ವೇಶ ಕ್ಲುಪ್ತಿಗೆ ಕೊಂಕು ಲೇಶಾವಿಲ್ಲೆನುತ॥ ತೋಷಪಡುತ ನಿರ್ದೋಷ ತಂದೆ ವೆಂಕಟೇಶ ವಿಠ್ಠಲ ಸರ್ವಾಶ್ರಯ ವೆಂದರಿದೀಸಮೀರ ಸಮ। ಯಾಸಕ್ರಿಯ ಚಿಧ್ಯಾನದಿ ನಿರ್ಗುಣ ದೇಶಿಯನರುಹಿದ॥7॥

**ಶ್ರೀನಾರದ ನಾದ ಸರಸೀರುಹ (ಕೀರ್ತನೆ)** **ರಾಗ: ಕನ್ನಡ, ರೂಪಕತಾಳ**

ಶ್ರೀನಾರದ ನಾದ ಸರಸೀರುಹ ಭೃಂಗ ಶುಭಾಂಗ॥ಪ॥ ದೀನಮಾನ ರಕ್ಷಕ ಜಗದೀಶ। ಭೇಷ ಸಂಕಾಶ॥ಅ.ಪ॥ ವೇದ ಜನಿತ ವರ ವೀಣಾವಾದನ ತತ್ವಜ್ಞ। ಖೇದಕರ ತ್ರಿತಾಪ ರಹಿತ ಖೇಚರ ವಿನುತ। ಯಾದವಕುಲ ಜಾಪ್ತ ಸದಾ ಮೋದ ಹೃದಯ ಮುನಿವರ್ಯ॥ಶ್ರೀ ತ್ಯಾಗರಾಜ ವಿನುತ ಶ್ರೀಕರ ಮಾಂ ಪಾಲಯ॥ಚರಣ॥

# ರಾಘವೇಂದ್ರಸ್ವಾಮಿಗಳು

## ದೇವರನಾಮ

**ಕೃಪೆ ತೋರಬಾರದೇ** **ರಾಗ: ವಲಚಿ, ಆದಿತಾಳ**

ಕೃಪೆ ತೋರಬಾರದೇ ಸದ್ಗುರುವರ ಶ್ರೀ ರಾಘವೇಂದ್ರ॥ಪ॥ ಅಪರಾಧ ಮನ್ನಿಸು ಅಪಾರ ಮಹಿಮನೆ। ಉಪಾಯ ತೋರಿ ನೀ ಉದ್ಧರಿಸು ಸದ್ಗುರುವೆ॥ಅ॥ ಪರಮ ಪಾವನನೆ ಪಾಪ ಪರಿಹಾರಕನೆ। ವರ ಮಂತ್ರಾಲಯಪುರ ನಿವಾಸನೆ। ಕರ ಮುಗಿಯುವೆ ನಿನಗೆ ಪೊರೆಯೌ ಸದ್ಗುರುವೆ॥1॥ ವರ ಶೃಂಗಗಿರಿ ಶಾರದಾಂಬೆಯ ದಾಸಿ ವಂದಿತ ರಾಘವೇಂದ್ರ। ಶರಣು ಶರಣು ಶರಣು ನಾನಿನಗೆ ಮೊರೆ ಕೇಳಿ ನೀಯೆನ್ನ ಪೊರೆಯಬಾರದೆ॥2॥

**ಗುರು ರಾಘವೇಂದ್ರ ನಿನ್ನ** **ರಾಗ:ಖಮಾಚ್**

ಗುರು ರಾಘವೇಂದ್ರ ನಿನ್ನ ಚರಣಾಂಬುಜ ಸೇವೆ। ಅನುದಿನ ಮಾಡುವಂತೆ ಅನುಗ್ರಹಿಸು॥ಪ॥ ಗುರುರಾಘವೇಂದ್ರ ನಿನ್ನ ದರುಶನ ಭಾಗ್ಯವ ನೀಡಿ। ನೀ ಎನ್ನ ಪಾವನಗೊಳಿಸೊ॥ಅ.ಪ.॥ ವರಮಂತ್ರಾಲಯ ಪುರದಿ ನೆಲೆಸಿಹ ಗುರುರಾಘವೇಂದ್ರ ವರಯತೀಂದ್ರ ಶಾರದಾದಾಸಿ ವಂದಿತ ಗುರುವರ ಶರಣು॥ಚರಣ॥

**ಬಂದ ನೋಡಿ ಗುರು** **ರಾಗ: ಚಕ್ರವಾಕ, ಆದಿತಾಳ**

ಬಂದ ನೋಡಿ ಗುರು ರಾಘವೇಂದ್ರ ಬಂದ ನೋಡಿ॥ಪ॥ ಬಂದ ಬಂದ ಶ್ರೀ ರಾಘವೇಂದ್ರ ಗುರು ರಾಜಮೂರ್ತಿ ಬಂದ॥ಅ.ಪ॥ ತುಲಸಿ ಮಾಲೆಯ ಧರಿಸುತ ಬಂದ। ದಂಡ ಕಮಂಡಲ ಪಿಡಿಯುತ ಬಂದ। ಗೋಪಿಮುದ್ರೆಯಿಂದೊಪ್ಪುತ ಬಂದ। ಸುಂದರ ಮೂರುತಿ ನಗುತ ಬಂದ॥1॥ ಕರದಲಿ ವೀಣೆಯ ಪಿಡಿಯುತ ಬಂದ। ವೀಣಾನಾದವ ಮಾಡುತ ಬಂದ। ಝೇಂಕಾರವನೆ ಗೈಯುತ ಬಂದ। ಸಂತಸದಿಂದ ಕುಣಿಯುತ ಬಂದ॥2॥ ದಯಾದೃಷ್ಟಿಯ ಬೀರುತ ಬಂದ। ಕರುಣಾಮೃತವನೆ ಉಣಿಸುತ ಬಂದ। ಅಮೃತಪಾನವ ಮಾಡಿಸೆ ಬಂದ। ಶಾರದೆ ಸನ್ನುತ ಶ್ರೀಗುರು ಬಂದ॥3॥

**ಶ್ರೀರಾಘವೇಂದ್ರ ಬಾರೋ** **ರಾಗ : ಮೋಹನ, ಆದಿತಾಳ**

ಶ್ರೀರಾಘವೇಂದ್ರ ಬಾರೋ। ಕಾರುಣ್ಯ ವಾರುಧಿ। ಆರಾಧಿಪ ಭಕ್ತರಾಭೀಷ್ಟ ಪೂರೈಸುವ ಪ್ರಭುವೇ।।ಪ।। ರಾಜವಂಶೋದ್ಭವನ ಪಾದರಾಜೀವಭೃಂಗನೇ ಬಾರೋ।। ರಾಜಾಧಿರಾಜರೊಳು ವಿರಾಜಿಸುವ ಚೆಲುವ।।1।। ವ್ಯಾಸರಾಯನೆನಿಸಿ ನೃಪನ। ಕ್ಲೇಶ ಕಳೆದವನೆ ಬಾರೋ।। ಶ್ರೀಸುಧೀಂದ್ರ ಕರಕಂಜಜ। ವಾಸುದೇವಾರ್ಚಕನೆ।।2।। ಸನ್ಯಾಸ ಕುಲದೀಪ ಬಾರೋ। ಸನ್ನುತ ಸದ್ಗುಣನೆ ಬಾರೋ। ಮಾನ್ಯ ಜಗನ್ನಾಥವಿಠಲ ಪ್ರಸನ್ನ ಜನರಪ್ರಿಯನೇ ಬಾರೋ।।3।।

**ಶ್ರೀರಾಘವೇಂದ್ರ ನಿಮ್ಮ ಚಾರು ಚರಣವ** **ರಾಗ: ನವರೋಜು, ಛಾಪುತಾಳ**

ಶ್ರೀರಾಘವೇಂದ್ರ ನಿಮ್ಮ ಚಾರು ಚರಣವ ಸಾರಿದೆ। ಶರಣಮಂದಾರ ಕರುಣ।।ಪ।। ಘೋರಭವ ನದಿ ದಾಟಿಸು ತವಕದಿ ಸೂರಿ ಸುಧೀಂದ್ರ ಕುಮಾರಉದಾರ।।ಅ.ಪ।। ಮುನಿರಾಯ ನಿಮ್ಮ ಪಾದ। ವನರುಹಧ್ಯಾನ ಪ್ರಣವಸುಪ್ತವನಾರ್ಚನೆಮಾಳ್ಪ ನಾನಾ ಜನರ ವಾಂಛಿತವೀವ ಗುಣ ಪೂರ್ಣಜ್ಞಾನ। ಧನವ ಪಾಲಿಸೆನಗೀಕ್ಷಣ ನಿನ್ನಾಧೀನ। ಮನುಜನ ಪ್ರತಿದಿನ ದಣಿದಣಿಸುವುದು। ಘನವೇ ಗುರುವೆ ಪಾವನನತಚರಿತ।।1।। ಮೂಲರಾಮನ ಪಾದಕೀಲಾಲಜ ಮಧುಪ। ಬಾಲನ ಭಿನ್ನಪ। ಲಾಲಿಸೋ ಮುನಿಪ। ತಾಳಲಾರೆನೋ। ತಾಪತ್ರಯದ ಸಂತಾಪ ಕೇಳೋ ವಿಮಲಜ್ಞಾನ ಶೀಲಸ್ವರೂಪ। ಭೂಲಲನಾಪತಿ ಕೋಲನಂದಿನೀ ಕೂಲಗ ವರಮಂತ್ರಾಲಯ ನಿಲಯ।।2।। ಕಲ್ಮಷ ದೂರ ಕುಜನಕುಠಾರ। ನಳಿನಾಕ್ಷ ವಿಮಲ ಶ್ರೀ ತುಳಸಿಯ ಹಾರಗಳ ಸುಶೋಭಿತ ಕಮಂಡಲ ದಂಡಧರ। ಅಲವಬೋಧರ ಮತಜಲಧಿವಿಹಾರ। ಸುಲಲಿತ ಕರುಣಾಂಬುಧಿ ಜಗನ್ನಾಥವಿಠಲನ ಒಲುಮೆಯ ಪಡೆದು ಇಳೆಯೊಳು ಮೆರೆದೆ।।3।।

**ಶ್ರೀರಾಘವೇಂದ್ರ ತವ ಚರಣಂ** **ರಾಗ: ಪುನ್ನಾಗವರಾಳಿ, ಆದಿತಾಳ**

ಶ್ರೀರಾಘವೇಂದ್ರ ತವ ಚರಣಂ। ಭಜಾಮಿ ಶರಣಾಗತ ಭವ ತರಣಂ।।ಪ।। ಶ್ರೀಸುಧೀಂದ್ರಕರಕಂಜ ಸಂಭವಂ। ಸುಧಾಂಶು ಮುಖ ಸಂಸ್ತುತ ಭಾವಿಭವಂ।।ಅ.ಪ.।। ಪಾವನ ವರಮಂತ್ರಾಲಯ ಸದನಂ। ಪತಿತ ಪಾವನ ಜಿತಮದನಂ।।1।। ವಾಸುದೇವಕವಿ ಸನ್ನುತ ಚರಣಂ। ಮೂಲರಾಮ ವರಕರುಣಾಭರಣಂ।।2।।

## ಭಕ್ತಿಗೀತೆ

**ಈ ಪರಿಯ ಮಹಿಮೆ** **ರಾಗ:ಕಾಂಬೋದಿ**

ಈ ಪರಿಯ ಮಹಿಮೆ ಇನ್ನಾವ ಯತಿಗಳಿಗುಂಟೋ। ಈಡಿಲ್ಲವೋ ಗುರು ರಾಘವೇಂದ್ರರಿಗೆ।। ಪಾಪರಾಶಿಗಳೆಲ್ಲಾ ಪರಿಹಾರ ಮಾಡುವರೋ। ಭೂತಳದಿ ಇವರ ದಿವ್ಯ ಸೇವೆಯನು ಮಾಡಿರೋ।।ಪ।। ರಾ ಎಂದು ನುಡಿದರೆ ರೋಗಗಳು ಬಾರವೋ। ಘ ಎಂದು ನುಡಿದರೆ ದುಷ್ಕಾರ್ಮ ಹಾನಿ। ವೇಂ ಎಂದು ನುಡಿದರೆ ವೈಕುಂಠ ತೋರಿಪರೋ। ದ್ರ ಎಂದರೆ ಸಕಲ ವೈಭವವ ಕೊಡುವ।।1।। ವರತುಂಗಾ ತೀರದಲಿ। ವೈಷ್ಣವ ಮತೋದ್ಧಾರ। ಪರಮ ಶೋಭಿತ ರಿವರು। ನೋಡಿದವ ಧನ್ಯ। ಕರಿರಾಜ ವರದನ। ಕರುಣೆ ಪಡೆದವರಿವರೊ ಕುಲಕೋಟಿ ಉದ್ಧಾರ ಮಾಡಲಿಹರು।।2।। ಸುರಧೇನು ಕಲ್ಪತರು। ವರ ಚಿಂತಾಮಣಿಯಂತೆ। ಸಕಲ ಭಾಗ್ಯವ ಕೊಡುವ। ಗುರುಸಾರ್ವಭೌಮ। ಪರಿಪರಿಯ ದೈವಗಳೊಳು ವೆಂಕಟೇಶನು ಅಧಿಕ। ಗುರುಗಳೊಳುಕರುಣಾಳು ಗುರು ರಾಘವೇಂದ್ರರು ।।3।।

**ಮೋಹನ ಮುರಳಿಯ ನಾದವ ಕೇಳಿ** **ರಾಗ: ಮೋಹನ, ಆದಿತಾಳ**

ಮೋಹನ ಮುರಳಿಯ ನಾದವ ಕೇಳಿ। ಪುಳಕಿತಗೊಂಡವು ಗೋವುಗಳೆಲ್ಲಾ। ಗುರುಸಾರ್ವ ಭೌಮರ ವೀಣಾಗಾನಕೆ। ಮೋಹನ ಕುಣಿದ ಆನಂದದಿಂದ।।1।। ಯಮುನೆಯ ತೀರದಿ ಬೃಂದಾವನದೊಳು। ಗೋಪಿಯರೊಡನೆ ಆಡಿದ ಮೋಹನ। ತುಂಗಾತೀರದಿ ಬೃಂದಾವನ ದೊಳು। ಭಕ್ತವೃಂದದಿ ಮೆರೆದಿಹ ಗುರುರಾಯ।।2।। ಕೃತಯುಗದಲಿ

ನರಹರಿಯಾದ ಮೋಹನ। ಪ್ರಹ್ಲಾದನಾದನಂದು ಶ್ರೀ ಗುರುರಾಯ। ರಾಮಕೃಷ್ಣರ ಪರಮ ಭಕ್ತರಾಗಿಂದು। ಭಕ್ತರ ಭವರೋಗ ಕಳೆದಿಹ ಗುರುರಾಯ॥3॥

**ಗುರು ರಾಘವೇಂದ್ರಸ್ವಾಮಿ ನಿಮ್ಮ** **ರಾಗ: ಬಿಲಹರಿ**

ಗುರು ರಾಘವೇಂದ್ರಸ್ವಾಮಿ ನಿಮ್ಮ ಪಾದವನಂಬಿದೆ ಗುರುದೇವ॥ಪ॥ ಹೇಗೆಗೈವೆನಯ್ಯ ನಿಮ್ಮ। ಪಾದಸೇವೆ ಯೆಂಬುದರಿಯೆ॥ಅ.ಪ.॥ ನಂಬಿ ಬಂದೆನ್ನ। ಕೈ ಬಿಟ್ಟರಾರನ್ನ। ಸಂರಕ್ಷಿಸೆಂಬೆ। ಗುರುವರ ನಿಮಗೀ। ಭಜಕನ ಮೊರೆಯಿಂ। ಕರುಣೆಯು ಜನಿಸಲಿ॥1॥ ಬಲು ಸಂಕಟದಿಂ ತೊಳಲುವೆ ನಾನ್। ಮನದಲಿ ಭವಭಯ ನೆಲೆಸಿಹುದೈ। ಯತಿವರ ನಿಮ್ಮಡಿಗಳ ನಾ। ನಮಿಸುವೆನೈ ಕರುಣಿಸಿ ಸಲಹಿರಿ॥2॥ ಓ ಗುರುಗಳೇ ನಾನು ಶರಣ ನೀವ್ ಗತಿಯನ। ಗೆಂದೆಂದುಂ। ಈ ಭಜಕನ ಕೈಬಿಡದಿರಿ। ಶ್ರೀಪ್ರದಗುರು। ರಾಜೇಂದ್ರ॥3॥ ಪಾಪಿಯು ನಾನಯ್ಯೊ। ನೊಂದಿಹೆ ಚೆನ್ನಾಗಿ। ಕೋಪಿಸಬೇಡಯ್ಯ॥ ಪೊಡಮಡುವೆಂ। ಕ್ಷಮಿಸುತೆ ಎನ್ನ। ಮನದಭಿಮತವನು। ಕರುಣಿಸಿ॥4॥

**ರಾಘವೇಂದ್ರ3 ಗುರುವರ** **ರಾಗ: ಹಿಂದೋಳ**

ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ಗುರುವರ। ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ಯತಿವರ॥ಪ॥ ರಾಗರಹಿತ ರಮ್ಯ ಚರಿತ ಯೋಗಿವರ್ಯ ಮುನಿವರ। ಭೋಗಭಾಗ್ಯ ಸಂಪದವನು ನೀಡುತ್ತಿರುವ ಗುರುವರ॥1॥ ಭಕ್ತಜನರ ಬಾಳ್ವೆಯಲ್ಲಿ ಬೆಳಗುತಿರುವ ಮುನಿವರ। ಮುಕ್ತಿಪಥವ ಕೃಪೆಯ ಮಾಡುವ ಕಲ್ಪತರುವೆ ಗುರುವರ॥2॥

**ರಾಮರ ಪೂಜಿಸಿ ರಾರಾಜಿಸಿರುತಿಹ** **ರಾಗ: ಕಾನಡ**

ರಾಮರ ಪೂಜಿಸಿ ರಾರಾಜಿಸಿರುತಿಹ। ರಾಘವೇಂದ್ರರೆ ರಕ್ಷಕರು॥ಪ॥ ಕಾಮಿತ ಕೊಡುತಿಹ ಕರುಣಾ ಮೂರುತಿ। ರಾಘವೇಂದ್ರರೆ ರಕ್ಷಕರು॥ ಲಕ್ಷ್ಮಾಧೀಶರು ಭಿಕ್ಷೆಗೆ ಬಂದಿಹರು ರಾಘವೇಂದ್ರರೆ ರಕ್ಷಕರು॥ ಹರಿಹರರನ್ನೇ ಅರಿಯದ ಜನರಿಗೆ। ರಾಘವೇಂದ್ರರೆ ರಕ್ಷಕರು॥ ವಿಧಿಯನು ನಂಬಿದ ವಿಬುಧಗೆ ಕೂಡ ರಾಘವೇಂದ್ರರೇ ರಕ್ಷಕರು॥ ನವಾಬು ಕಳಿಸಲು ಜವಾಬು ನೀಡಿದ ರಾಘವೇಂದ್ರರೆ ರಕ್ಷಕರು॥

**ವರಮಂತ್ರಾಲಯವಾಸ ಗುರುವೇ** **ರಾಗ:ಮಿಶ್ರಪೀಲು**

ವರಮಂತ್ರಾಲಯವಾಸ ಗುರುವೇ। ನರಚಿಂತಿತ ಸುರಚಿತ ತರುವೇ ಅಂತರಂಗದಿ ಭಕ್ತರಿಗೊಲಿವೇ। ಸ್ವತಂತ್ರಾದಿ ಮೆರೆಯೋ ದೊರೆಯೇ॥ಪ॥ ಹೇ ರಾಘವೇಂದ್ರ ಸದ್ಗುಣ ಸಾಂದ್ರ। ಸನ್ನುತ ಸ್ವರಚಿತವೇಂದ್ರ। ಕಾಯೋ ಕಾಯೋ ಎಮ್ಮನು ಗುರುರಾಯ। ಶಿರಬಾಗಿ ನಮಿಸುವೆ ಜೀಯಾ। ನಿರುತವು ದಯ ಬೀರಯ್ಯ। ನಿನ್ನ ಚರಣಾವ ನಂಬಿದೆನಯ್ಯ॥1॥ ಬನ್ನ ಪಡುವರಾ ಉನ್ನತಿಗೆಂದು ಹೊನ್ನಾಳಿಯಲಿ ನೀನೆ ನೆಲೆಸಿರುವೆ। ಒಳ್ಳೆಯ ಮನದಿಂದ ಪೂಜಿಸಿದಲ್ಲಿ ಗುರುದೇವನಾ ಹತ್ತಿರದಲ್ಲಿ। ಮನಕೆ ಸಂದೇಹ ಬಾರದೋ ಅಲ್ಲಿ। ಗುರುಗಳಾ ಪಾದದಲ್ಲಿ॥2॥ ಜಡಮತಿಗಳನು ಬಡಿದೆಬ್ಬಿಸಲು। ಉಡುಗಣಿ ಕ್ಷೇತ್ರದಿ ನೆಲೆಸಿರುವೇ। ಒಳ್ಳೆಯ ಮನದಿಂದ ಪೂಜಿಸಿದಲ್ಲಿ। ಗುರುದೇವನಾ ಹತ್ತಿರದಲ್ಲಿ। ಮನಕೆ ಸಂದೇಹ ಬಾರದೋ ಅಲ್ಲಿ। ಗುರುಗಳಾ ಪಾದದಲ್ಲಿ॥3॥

**ಶ್ರೀಗುರು ರಾಘವೇಂದ್ರ ಭಜನೆಯನು** **ರಾಗ: ಕಲ್ಯಾಣಿ**

ಶ್ರೀಗುರು ರಾಘವೇಂದ್ರ ಭಜನೆಯನು। ಗೈಯುವೆ ಅನುದಿನ ಹರುಷದಲಿ॥ಪ॥ ತುಂಗಾತೀರದ ನೆಲೆಸಿರುವೆ ಅಂದದಿ ಜ್ಞಾನವ ನೀಡಿರುವೆ। ಎಮ್ಮನು ಕಾಯೊ ಕರುಣೆಯ ನೀಡೊ ಪರಮ ಪೂಜ್ಯ ಹೇ ರಾಘವೇಂದ್ರ॥1॥ ಜ್ಞಾನವಿಲ್ಲದ ಜನತೆಯಲಿ ಜ್ಞಾನ ಮಳೆಯನು ಸುರಿಸುತಲಿ। ಭಕ್ತಿಯ ಹುಟ್ಟಿಸಿ ಯುಕ್ತಿಯ ನೀಡಿದೆ ಪರಮ ಪೂಜ್ಯ ಹೇ ರಾಘವೇಂದ್ರ॥2॥ ದುಷ್ಟ ಜನರನ್ನು ಶಿಕ್ಷಿಸುತ ಶಿಷ್ಟ ಜನರನು ರಕ್ಷಿಸುತ। ಎಮ್ಮನು ಕಾಯ್ದು ಕರುಣೆಯ ನೀಡು ಪರಮ ಪೂಜ್ಯ ಹೇ ರಾಘವೇಂದ್ರ॥3॥

# ಶಿಶುನಾಳ ಶರೀಫ

### ಜೋಗುಳ ಪಾಡಿರಮ್ಮ ಜಲಜಾಕ್ಷಿಯರೆಲ್ಲಾ

ಜೋಗುಳ ಪಾಡಿರಮ್ಮ ಜಲಜಾಕ್ಷಿಯರೆಲ್ಲಾ।।ಪ।। ಶ್ರೀಗುರುವೆನುತಲೀ ಯೋಗಮಂದಿರದೊಳು। ತೂಗುವ ಕಂದನ ಜೋಗುಳ ಪಾಡಿರಿ।।1।। ಒಂದು ಹಿಡಿದು ಒಂಭತ್ತು ಬಾಗಿಲ। ನಡು ಹಂದರದಲಿ ಸಂಧಿಸಿದ। ಮಂಟಪದಿ ಕುಂದಣ ಕೆಚ್ಚಿದ ತೊಟ್ಟಿಲೊಳಗೆ। ಆನಂದದಿಂದ ಮಲಗಿದ ಸುಂದರ ಕಂದಗೆ।।2।। ತಳಿರಡಿ ಒಳದೊಡಿ ಬಾಳಿಯ ಸಮ ಶಶಿನಡು। ಸುಳಿನಾಡಿಯ ಮಗ್ಗಿಯ ಮ್ಯಾಲೆ। ಮಳೆವಳಿಸುತ ತೋರುತ ಬಿಕ್ಕುತ ಬಂದವಳ ಹಿಡಿದಾತ್ಮ ಮೈಯೊಳೊಪ್ಪುವ।।3।। ಪಟ್ಟೆ ಪೀತಾಂಬರವನ್ನುಟ್ಟು ಕಂಚುಕಿಯ। ತೊಟ್ಟಾಭರಣಗಳಿಟ್ಟು ಬರುವರು। ಪಟ್ಟಣದೊಳಗಿನ ಧಿಟ್ಟ ಸಖಿಯರೆಲ್ಲ। ನಿಷ್ಟೆ ಹಿಡಿದು ನಿಜ ಆಲಯದೊಳಗೆ।।4।। ಶಶಿಮುಖಿಯರು ವಿಲಾಸದಿ ಹಾಡುತ। ಕ್ಲೇಶವಳಿದು ಸಂತೋಷದಿ ಕೂಡುತ। ದೇಶದೊಳಧಿಕ ಶಿಶುನಾಳ ಸದ್ಗುರುವಿನ। ಭಾಸುರ ಕಿರಣ ಪ್ರಕಾಶನಿಗೆ।।5।।

## ಇತರೆ

### ಅರವಿಂದವೃಂದದಲಿ — ರಾಗ: ಸಿಂಧುಭೈರವಿ

ಅರವಿಂದವೃಂದದಲಿ। ಭ್ರಮರಗಳು ಮಕರಂದ ಲೀಲೆ। ಆಡುತಿವೆ ಗುರುವಿನೊಡನೆ। ಸರಸವಾಡುವ ವಿದ್ಯಾರ್ಥಿಗಳಂತೆ।।1।। ಸಕ್ಕರೆ ಅಚ್ಚನು ಜೇನಿನಲಿ ಕರಗಿಸಿ। ಹಲಸಿನ ತೊಳೆಗಳ ರಸವನು ಹಿಂಡಿ। ಕಬ್ಬಿನ ರಸವನೆರೆದು ಮಾಡಿದ ಪಾನಕದೊಲು। ಸುರುಚಿ ಮಕರಂದವದುವೆ ಜ್ಞಾನಗಂಗಾ ಸಲಿಲಕಿಂತ ಪಾವನ।।2।। ಪರಮಹಂಸ ವಿವೇಕಾನಂದರ ಅನುಪಮ ಭಕ್ತಿ ಬಂಧನ। ವಿದ್ಯಾರ್ಥಿಗಳಿಗಿಂದು ಆದರ್ಶ-ನಾಕ ಸೋಪಾನ ಗುರು ಶಿಷ್ಯರ ಮೈತ್ರಿಗೆಣೆಯುಂಟೆ।।3।।

### ಅನ್ನಮಯ್ಯಂ ನೀಕು ಸಾಷ್ಟಾಂಗ — ರಾಗ: ಪುನ್ನಾಗವರಾಳಿ

ಅನ್ನಮಯ್ಯಂ ನೀಕು ಸಾಷ್ಟಾಂಗ ವಂದನಂ।। ಅನ್ನಮಯ್ಯ ಓ ಅನ್ನಮಯ್ಯ।।ಪ।। ಅನ್ನಮಯ್ಯ್।। ವಿನ್ನಾಮಯ್ಯ ನೀದು ವಿವಿಧ ಸಂಕೀರ್ತನ। ಲೆನ್ನೊವಿನ ನಿನ್ನು ಕವಿತಾ ಪಿತಾಮಹುಡನ್ನಮಯ್ಯ। ನೀಕು ಸಾಷ್ಟಾಗಂ ವಂದನಂ। ಅನ್ನಮಯ್ಯ ಓ ಅನ್ನಮಯ್ಯ।।1।। ಕನ್ನಾಮಯ್ಯ ಮಹಿಮಲೆನ್ನೋ ನೀಲೋ। ಕನಿ ನೀದು ಬೋಧನಲನ್ನಿ ತೆಲುಸುಕೋನ್ನಾ ಅನ್ನಮಯ್ಯ। ನೀಕು ಸಾಷ್ಟಾಂಗ ವಂದನಂ। ಅನ್ನಮಯ ಓ ಅನ್ನಮಯ್ಯ।।2।। ಪುನ್ನಾಮಯ್ಯಾತನಲ ಪೋಗೊಟ್ಟು ವರಮಿವ್ವ। ಮುನ್ನಾಮು ಮುರಳೀರವ ರೂಪಾನೀ ಸಾಟಿ ಲೇ ರನ್ನಮಯ್ಯ। ನೀಕು ಸಾಷ್ಟಾಂಗ ವಂದನಂ। ಅನ್ನಮಯ್ಯ ಓ ಅನ್ನಮಯ್ಯ।।3।।

### ಅಪ್ಪ ನೀ ವರಪ್ರಸಾದಿ ಅನ್ನಮಯ್ಯ

ಅಪ್ಪ ನೀ ವರಪ್ರಸಾದಿ ಅನ್ನಮಯ್ಯ। ಅಪ್ಪಸೆಮು ಮಾಕೇ ಕಲಡನ್ನಮಯ್ಯು।।ಪ।। ಅಂತಟಿಕಿ ನೇಲಿಕೈನ ಆದಿನಾರಾಯಣತನ। ಅಂತರಂಗಾನ ನಿಲಿಚೆನು ಅನ್ನಮಯ್ಯ। ಸಂತಸಾ ಚೆಲುವೊಂದೆ ಸನಕಸನಂದನಾದು। ಲಂತಟಿವಾಡು ತಾಳ್ಳಪಾಕ ಅನ್ನಮಯ್ಯ।।1।। ಅಂದಮುಗ ರಾಮಾನುಜ ಆಚಾರ್ಯ ಮತಮುನಕು। ಅಂದುಕೋನಿ ನಿಲಿಚಿನಾಡು ಅನ್ನಮಯ್ಯ। ವಿಂದುವಲೆ ಮೀಕುನು ಶ್ರೀವೆಂಕಟನಾಥುನಿ ಇಚ್ಚೆ। ಅಂದರಿಲೋ ತಾಳಪಾಕ ಅನ್ನಮಯ್ಯ।।2।।

**ಆವೋ ಗುರುದೇವ (ಹಿಂದಿ)** **ರಾಗ: ಮೋಹನ**

ಆವೋ ಗುರುದೇವ, ದರುಶನ ದೀಜೋ। ತುಮ್ ಹೋ ಜಗತ್ ಕೆ ದಾತಾ॥ಆವೋ॥(2) ತುಮ್ಹೀ ಹೋ ಬ್ರಹ್ಮ, ತುಮ್ಹೀ ಹೋ ವಿಷ್ಣು। ತುಮ್ಹೀ ಹೋ ಶಂಕರ ರೂಪಾ। (2)॥ ಸೃಷ್ಟಿ ಸ್ಥಿತಿ ಲಯ ಸ್ವರೂಪ್ ತುಮ್ ಹೋ। ತುಮ್ ಹೋ ಅನಾದಿ ರೂಪ॥(2)॥ ಆವೋ॥ ಅನಾಥ ನಾಥ, ದೀನಬಂಧು। ತುಮ್ ಹೋ ಆನಂದ ರೂಪ। ಅಜ್ಞಾನ ನಾಶಕ್, ಶರಣ ಸಂರಕ್ಷಕ್ ಆತ್ಮ ಜ್ಞಾನ ಪ್ರದಾತಾ॥ಆವೋ……ಜಗತ್ ಕೆ ದಾತಾ॥

**ಎಂಥಾ ಗುರುಶಿಷ್ಯರ ಜೋಡಿಯು** **ರಾಗ: ವಾಗಧೀಶ್ವರಿ**

ಎಂಥಾ ಗುರುಶಿಷ್ಯರ ಜೋಡಿಯು ನೋಡಿರಿ। ಇಂಥವರ ಸ್ಮರಿಸಿದರೆ ಚಿಂತೆ ದೂರಾಗುವದು॥ಪ॥ ಧ್ರುವರಾಜವಂಶ ದಿಂದಿಳೆಯೊಳಗೆ ಅವತರಿಸಿ। ಸರ್ವದುರ್ವಿಷಯದಲಿ ವೈರಾಗ್ಯ ಬೆಳೆಸಿ। ಬಾಲ್ಯದಲ್ಲಿ ಪರಮಹಂಸಾಶ್ರಮ ಸ್ವೀಕರಿಸಿ। ಶ್ರೀಪಾದ-ರಾಜರೆಂದೆನಿಸಿ ಮೆರೆವರು ನೋಡು॥1॥ ಶ್ರೀಶನನು ಕಂಬದಿಂದ ತಂದ ಪ್ರಹ್ಲಾದನೆ। ವ್ಯಾಸಮುನಿಯಾಗಿ ಅವತರಿಸಿ, ಬಂದು। ದೇಶಾಧಿಪತಿಗೆ ಬಂದಾಪತ್ತು ಪರಿಹರಿಸಿ। ಶ್ರೀಪಾದರಾಜರಿಗೆ ಶಿಷ್ಯರಾದರು ನೋಡು॥2॥ ಜ್ಞಾನ ವೈರಾಗ್ಯ ಭಕ್ತಿಯು ತುಂಬಿರುವುದು। ದೀನಜನ ಮಂದಾರ ಭಕ್ತಪುರಧೇನು। ವಿಜಯೀಂದ್ರ ವಾದಿರಾಜರಿಗೆ ಗುರು ಪರಮಗುರು। ಭೂಮಪತಿ ವಿಠ್ಠಲನ ಕುಣಿಸಿದ ಮಹಾತ್ಮರು॥3॥

**ಏನುತಪ ಗೈದೆನೋ** **ರಾಗ: ರೀತಿಗೌಳ, ರಚನೆ: ಕೆ. ರಾಜಲಕ್ಷ್ಮೀ**

ಏನುತಪ ಗೈದೆನೋ ಶ್ರೀ ಗುರುಕರುಣೆದೊರಕಲು॥ಪ॥ ಸದ್ಗುರುವಿನ ಸಂಗ ಸಿಗಲು ಪೂರ್ವಜನ್ಮದ ಪುಣ್ಯಫಲವೊ॥ಅ.ಪ॥ ವೇದ ಪುರಾಣಾಧ್ಯಯನದಿಂದ ಸಿಗದ ಜ್ಞಾನ। ನಿನ್ನ ಸಂಗದಿ ಸುಲಭದಿ ಗ್ರಹಿಸಿದೆ॥1॥ ಮಲ್ಲಿಗೆಯ ಬಳ್ಳಿಯಲ್ಲಿ ಹೂವು ಬಳುಕುವಂತೆ। ಸಿಂಗಾರ ಸೌರಭದ ಕಂಪನೆರೆದೆಯೋ ತಂದೆ। ಅಜ್ಞಾನಹತ್ತಿಕ್ಕಿ ಜ್ಞಾನದ ದೀವಿಗೆ ಬೆಳಗಿ ಅಪರೂಪದ ಆನಂದ ರಸವನೆ ಅನುಗ್ರಹಿಸಿ। ಕಾಣದಾರೂಪದಿ ಮನದಿ ನೆಲಸಿಹೆ ನೀನು। ಜೀವನದಿ ಸವಿಯುಣಿಸಿ ಜನ್ಮ ಸಾರ್ಥಕತೆ ಇತ್ತೆ॥

**ಕರೆಯುವೆ ಬಾ ಮನೆಗೆ ಗುರುದೇವಾ** **ರಾಗ: ಬೇಹಾಗ್, ಆದಿತಾಳ**

ಕರೆಯುವೆ ಬಾ ಮನೆಗೆ ಗುರುದೇವಾ। ಕರೆಯುವೆ ಬಾ ಮನೆಗೆ॥ಪ॥ ಕರಪಿಡಿದೆನ್ನನು ಪೊರೆಯಲು ಬಾ ಬಾ। ಕಾಮಿತಫಲವನು ನೀಡಲು ಬಾ ಬಾ। ಜ್ಞಾನದೀಕ್ಷೆಯನು ಕರುಣಿಸು ಬಾ ಬಾ। ನೊಂದ ಮನುಜರ ರಕ್ಷಿಸು ಬಾ ಬಾ॥1॥ ನಾರದ ಮುನಿಯಂತೆ ಗಾನಮಾಡುತ ಬಾ ಬಾ। ಶುಕಮುನಿಯಂತೆ ಬೋಧಿಸುತ ಬಾ ಬಾ। ಪರಮಹಂಸರಂತೆ ಧ್ಯಾನಿಸುತ ಬಾ ಬಾ। ನಿರ್ಮಲ ಹೃದಯವ ತಣಿಸುತ ಬಾ ಬಾ॥2॥ ಚಂದ್ರಕಿರಣದಂತೆ ಬೆಳಗುತ ಬಾ ಬಾ। ಅಜ್ಞಾನತಮವನು ಹರಿಸಲು ಬಾ ಬಾ। ಎಲ್ಲರ ಮನದಲಿ ನೆಲೆಸಲು ಬಾ ಬಾ। ಚೈತನ್ಯದಾಸನ ಸಲಹಲು ಬಾ ಬಾ॥3॥

**ಕವಿವರ ಕುಮಾರವ್ಯಾಸನ ಕಾವ್ಯವು (ವ್ಯಕ್ತಿಚಿತ್ರಣ–ಲಾವಣಿ)**

ಕವಿವರ ಕುಮಾರವ್ಯಾಸನ ಕಾವ್ಯವು ಕನ್ನಡಿಗರ ಮನ ತಣಿಸುವುದು। ಕನ್ನಡ ಕಾವ್ಯಕೆ ಹಿರಿಮೆಯ ತೋರಿ। ಕವಿವರ ಜಯ ಜಯ ಎನುತಿಹುದು॥ ಭಗವಾನ್ ಶ್ರೀಹರಿ ಸೂತ್ರಧಾರಿ ಭಕ್ತನಾರಾಯಣಪ್ಪನು। ಭವ್ಯತೆಯ ತೋರಿ। ಭಾರತ ಕಥಾಮೃತ ಜ್ಯೋತಿಯ ಬೆಳಗಿಸಿ। ಭಕ್ತಿಯೆಂಬ ಭಾವಧಿ ಕಾವ್ಯವ ಹರಿಸಿ॥ ನವರಸದ ಕೋಡಿಯಲಿ ಮೂಡಿಹುದು। ನಮ್ರತೆಯ ಭಾವವು ನೆಲೆಸಿಹುದು। ನಯನದಲಿ ಅದ್ಭುತವ ಸೆರೆ ಹಿಡಿದಿಹುದು। ನವೀನ ಸುಧೆಯನು ಉಣಿಸಿಹುದು॥

**ಕುಮಾರ ವ್ಯಾಸನು ಹಾಡಿದನೆಂದರೆ**

ಕುಮಾರ ವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು। ಭಾರತ ಕಣ್ಣಲಿ ಕುಣಿಯುವುದು। ಮೈಯಲಿ

ಮಿಂಚಿನ ಹೊಳೆ ತುಳುಕಾಡುವುದು।। ಆ ಕುರುಭೂಮಿಯು ತೋರುವುದು। ಆ ರಣರಂಗದಲಿ ಆ ಸಂಗ್ರಾಮದಲಿ ಪಟುಭಟರಾರ್ಬಟ ಕೇಳುವುದು। ಮೈ ನವಿರೇಳುವುದು ಹೊಳೆಯುವ ಕೈದುಗಳಾಟದಲಿ ಕಲಿಗಳ ಕದನದ ಕೂಟದಲಿ। ತಾಗುವ ಗದೆಗಳ ಸಂಘಟ್ಟಣೆಯಲಿ ರಥ ಚಕ್ರಧ್ವನಿ ಚೀತ್ಕಾರದಲಿ। ಸಾಯ್ವರ ಶಾಪದಲಿ ಬೀಳ್ವರ ತಾಪದಲಿ ನಸು ಸೋತಿರುವರ ಕೋಪದಲಿ। ನೆರೆ ಗೆದ್ದಿಹರಾಟೋಪದಲಿ ನುಗ್ಗುವ ಸೈನ್ಯದ ಹಾಹಾರವದಲಿ ಕೆನೆಯುವ ಹಯಗಳ ಹೇಷಾರವದಲಿ ಕಿವಿಬಿರಿಯುವುದು! ಎದೆ ಮುರಿಯುವುದು ! ಬಸಿಯುವ ಮಜ್ಜೆಯ ಪಂಕದೊಳೊಡಿ ಚಿಮ್ಮುವ ರಕ್ತದ ಬುಗ್ಗೆಯ ನೋಡಿ ಕಣ್ಣೊಡೆಯುವುದು ! ಮೈ ನಡುಗುವುದು!

ಕೇಳಿರಿ ! ಪಾರ್ಥನ ಸಾರಥಿಯ ರಣ ಗೀತೆಯನು, ರಣ ನೀತಿಯನು, ಬೋಧಿಸುವನು ನಿರ್ಭೀತಿಯನು ! ಕುರುರಂಗದ ಶರಶಯ್ಯೆಯಲಿ ಭೀಷ್ಮನು ಮಲಗಿಹನು! ಹೆಣಗಳ ಬಣವೆಯ ಮಂಚದಲಿ ದ್ರೋಣನು ಬಿದ್ದಿಹನು! ನೆತ್ತರವೀಂಟುತಲಿರುವವನು ಭೀಮನು, ಅಯ್ಯೋ ನೋಡಲ್ಲಿ! ರಥದಿಂದುರುಳುತಲಿರುವವನು ಕರ್ಣನು, ಹಾ! ಹಾ! ನೋಡಲ್ಲಿ! ರಣ ಚಂಡಿಯು ಆ ಬೆಂಕಿಯ ಮಗಳು ಹೆಣ್ಣಿನ ರೂಪದ ಬರಸಿಡಿಲವಳು! ಮುಗುಳ್ನಗೆ ಬೀರುತ ನೋಡಲ್ಲಿ ನಿಂತಿರುವಳು ರಣರಂಗದಲಿ ದ್ರೌಪದಿ ಮುಡಿಗೆದರಿ! ವೈಶಂಪಾಯನ ಸರಸಿಯ ತೀರದಿ, ತೋರುವರಾರಲ್ಲಿ? ಕೌರವದೇವನು ಸಿಡಿಲಾಗಿರುವವನು ಭೀಮನು ಸರಿಸದಲಿ! ವೈರಿಯ ಎದೆಯನು ಬಡಿಯುವ ಗದೆಯನು ಮೇಲೆತ್ತಿರುವನು ನೋಡಲ್ಲಿ! ಭೀಮನು ಬಿದ್ದನೆ? ಕೌರವ ಗೆದ್ದನೆ? ಮುಂದಾಗುವುದು ಕಾಣಲ್ಲಿ!

ಇದಾವ ನ್ಯಾಯ? ಏನನ್ಯಾಯ ? ಕೃಷ್ಣನ ಕುಹಕವ ನೋಡಲ್ಲಿ? ಏನನು ನೋಡುವೆ? ತಡೆಯುವೆ ಏಕೆ ? ಕೌರವರಾಯನು ಮಡಿಯಲೆ ಬೇಕೆ? ಯುವಕನೆ, ತುಡುಕು ಕಟಾರಿಯನು! ಹೊಡೆ ರಣಭೇರಿಯನು! ನಡೆ, ನಡೆ, ಊದು ತುತ್ತೂರಿಯನು! ಕರೆ ರಣಮಾರಿಯನು!

ಕುಮಾರ ವ್ಯಾಸನು ಹಾಡಿದನೆಂದರೆ, ಕಲಿಯುಗ ದ್ವಾಪರವಾಗುವುದು ! ಭಾರತ ಕಣ್ಣಲಿ ಕುಣಿಯುವುದು। ಮೈಯಲಿ ಮಿಂಚಿನ ಹೊಳೆ ತುಳುಕಾಡುವುದು! ಕಲಿ ಕೆಚ್ಚಾಗುವನು! ಕವಿ ಹುಚ್ಚಾಗುವನು!

### ನಮೋ ಕುಮಾರವ್ಯಾಸ ಕವಿವರ — ರಾಗ: ಕಲ್ಯಾಣಿ

ನಮೋ ಕುಮಾರವ್ಯಾಸ ಕವಿವರ। ಸಮೂಹತಾರ ಚಂದ್ರಯೋಗೀಂದ್ರ ನಮೋ।।ಪ।। ಸಮಾನ ರಹಿತ ಶ್ರೀರಮಾರಮಣ ಸುಮ ಹಿಮಾಕಥನ ಚತುರ ಪುಣ್ಯ ವ ಖರುತೀ ನಮೋ।।ಅ.ಪ।। ಗದುಗು ವೀರನಾರಾಯಣ ಸ್ವಾಮಿಯ ಪದ ಸರೋಜ ಮಕರಂದವನು ಮುದದಿ ಸೇವಿಸುತ ಸಿರಿಗನ್ನಡದಲಿ। ಮಧುರಾನಾಥನ ಚರಿತೆಯ ರಚಿಸಿದೆ ನಮೋ।।1।। ವರ ಭಾಮಿನಿ ಷಟ್ಪದಿಯ ಶೈಲಿಯಲಿ ಪರಮ ಸುಂದರದ ಕಾವ್ಯವನು ವಿರಚಿಸಿ ಕನ್ನಡ ವಾಗ್ದೇವಿಯ ಸಿಂಗರಿಸಿದೆ। ಪೀಠದಿ ರತ್ನ ಕಿರೀಟದಿ ಶೋಭಿಸಿದೆ ನಮೋ।।2।। ನಿನ್ನ ಕಾವ್ಯ ಗಾನಾಮೃತಪಾನವೆ। ಎನ್ನುಸಿರಾಗಲು ಜೀವನದೀ। ಎನ್ನದೇನು ಘನ ನಿನ್ನದೆ ಕೃಪೆಯು। ಧನ್ಯನೆನಿಸೋ ಎನ್ನ ರಘುವರಪ್ರಿಯ ಜಯ ನಮೋ।।3।।

### ಗುರುಚರಣವ ಸ್ಮರಿಸೋ — ರಾಗ: ಮಾಂಡ್

ಗುರುಚರಣವ ಸ್ಮರಿಸೋ ನಿರಂತರ। ಪರಗತಿ ಸಾಧನಕಿದು ಆಧಾರ।।ಪ।। ಕಾಶಿ ಮಠದ ಸಂಸ್ಥಾನದಿರಾಜಿಪ। ಶ್ರೀ ಸುಧೀಂದ್ರ ಗುರುವರ ಚರಣಾಂಬುಜ। ವ್ಯಾಸರಘುಪತಿಯ ದಾಸವರೇಣ್ಯರ। ನಿಶಿದಿನ ಮನದಲಿ ಸ್ಮರಿಸೋ ಮಾನವ।।1।। ದಾಸಜನರ ಮನದಾಸೆ ಪೂರೈಸುವ। ಶ್ರೀಶನ ಭಜಿಸುವ ಯೋಗಿವರೇಂದ್ರರೇ। ದೋಷಗಳೆಣಿಸದೆ ಜ್ಞಾನ ಭಕ್ತಿಯನಿತ್ತು। ದಾಸರ ದಾಸನ ಸಲಹೊ ಗುರುವೇ।।2।। ಮದ್ವಗುರೋ ಜಯ ಮದ್ವ ಗುರೋ। ಮಧ್ವಾಂತರ್ಗತ ವ್ಯಾಸಗುರೋ।। ಭವ ಹರಿಸೈ ಭುವನೇಂದ್ರ ಗುರೋ।।3।। ವರವನೀಯೋ ವರದೇಂದ್ರ ಗುರೋ।।ಸುಖವನೀಯೋ ಸುಕೃತೀಂದ್ರ ಗುರೋ।। ಸನ್ಮತಿಯೀಯೊ ಸುಧೀಂದ್ರ ಗುರೋ।।4।।

**ಗುರು ಗೋವಿಂದರು ಎನಗೆದುರಾದರೆ** ಲಾವಣಿ

ಗುರು ಗೋವಿಂದರು ಎನಗೆದುರಾದರೆ। ವಂದಿಪೆ ಮೊದಲು ಗುರುವರಗೆ।।ಪ।। ಗುರುವಿನ ಕರುಣೆ ಬಹುವಾಗಿಹುದು। ಆತನ ಮಹಿಮೆ ಎಣೆ ಇಲ್ಲದಿಹುದು। ಆತನ ನುಡಿಯು ಅಮೃತಧಾರೆಯು। ಪಾನಮಾಡಿದ ನಾವೇ ಧನ್ಯರು।।1।। ಅಂಧಕಾರವನ್ನು ಹರಿಸುವ ಗುರುವು। ಸುಜ್ಞಾನ ಭಿಕ್ಷೆಯ ನೀಡುವ ಗುರುವು। ದೇವನೆಡೆಗೆ ಕರೆದೊಯ್ಯುವ ಗುರುವು। ಬದುಕಿಗೆ ಆಸರೆ ನೀಡುವ ಗುರುವು।।2।। ಗುರುವನು ತೋರಿದ ದೈವಗೆ ನಮಿಸುವೆ। ಆತನ ಕರುಣೆಗೆ ಋಣಿಯಾಗಿರುವೆ। ಆತನ ಪೂಜೆಯ ಅನುದಿನ ಮಾಡುವೆ। ಚೈತನ್ಯ ದಾಸನ ಪೊರೆ ಎಂದು ಬೇಡುವೆ।।3।।

**ಜ್ಞಾನದೇಗುಲದಿ ಜ್ಞಾನದೀವಿಗೆ** **ರಾಗ: ಸಾರಂಗ**

ಜ್ಞಾನದೇಗುಲದಿ ಜ್ಞಾನದೀವಿಗೆ ಬೆಳಗಿಸಿದಾಕೆ। ನನ್ನ ಜೀವನಕೆ ತಿರುವ ನೀಡಿ ತಿದ್ದಿ ತೀಡಿದಾಕೆ। ಗುರುಕುಲದಂತೆ ಮನೆಯಲಿತ್ತೆನ್ನ ಸಾಕಿದಾಕೆ। ಎಲೆಮರೆಯ ಕಾಯಂತೆ ಸೇವೆ ಸಲ್ಲಿಸಿದಳೀಕೆ। ಗುರುಶಿಷ್ಯರ ಮೈತ್ರಿಗೆ ಸರಿಸಾಟಿ ಉಂಟೇ? ಪಾಠಶಾಲೆಯಲಿ ಇಂಥ ಗುರು ಸಿಗುವುದುಂಟೇ? ಅವರಿತ್ತದಾನ ನಡೆಸಿದ ದಾರಿ ವೃತ್ತಿಗೌರವವೆಸರಿ। ಅಧ್ಯಾಪಕಿಯಾಗಬೇಕೆಂಬಾಸೆ ನನ್ನಲಿ ಬಿತ್ತಿದಾಕೆಗೆ ನಮನ।। ಪ್ರಶಿಕ್ಷಣ ನೀಡಿ ಅನ್ನ ಉಣಿಸಿ ಬೆಳಸಿ ಪ್ರಸನ್ನಳಾದಾಕೆ। ಪರಿಶ್ರಮಿಸಿ ನನ್ನ ಅಧ್ಯಾಪಕಿಯನ್ನಾಗಿ ಮಾಡಿಸಿದಳೀಕೆ। ಪ್ರಗತಿಯ ನೋಡಿ ಹೆಮ್ಮೆ ಪಟ್ಟು ಆಶೀರ್ವದಿಸಿದಾಕೆ। ಬಾರೆ ಹುಡುಗಿ ಎಂದು ಕರೆಯುತ್ತಾ ಅನುರಾಗ ನೀಡಿದಾಕೆ।।

**ಚಂದ್ರಶೇಖರ ಭಾರತಿ ಗುರುವೇ**

ಚಂದ್ರಶೇಖರ ಭಾರತಿ ಗುರುವೇ। ಪರಮ ಕೃಪಾಸಿಂಧೇ। ಎಂದೆಂದಿಂಗೂ ನಿಮ್ಮಯ ನಿಜ ಪಾದಕಮಲವ। ನಂಬಿಸ್ತುತಿಸುವೇ।।1।। ವೇದ ಶಾಸ್ತ್ರಪಾರಂಗತಾ। ಭೇದ ಭಾವ ವಿವರ್ಜಕ। ಮೋದಕರ ಸಂಪೂಜಿತಾ। ಶ್ರೀಧರಾದಾಸಾದಿ ವಿನುತಾ।।2।। ಶೃಂಗಗಿರೀ। ಗುರುಕುಲೇಶಾ। ತುಂಗಾನದೀ ತಟನಿವಾಸ। ಸಂಗರಹಿತ। ಮಂದಹಾಸ। ಮಂಗಳಾಂಗ ಸುಪ್ರಕಾಶ।।3।। ದೀನದಯಾ।ಪೂರ್ಣಮಹಿಮ। ಜ್ಞಾನ ವೈರಾಗ್ಯ ಸೋಮ। ಅನಾಥ ಪಾಲಕಲಲಾಮ ಜ್ಞಾನಯೋಗ ನಿಸ್ಸೀಮಾ।।4।।

**ದಾರಿ ತೋರಿಸಯ್ಯ ಸದ್ಗುರು** **ರಾಗ : ನಾದನಾಮಕ್ರಿಯೆ, ಆದಿತಾಳ**

ದಾರಿ ತೋರಿಸಯ್ಯ ಸದ್ಗುರು। ದಾರಿತೋರಿಸಯ್ಯ।।ಪ।। ಏರುದಿನಗಳೆಲ್ಲ, ಭವದೊಳು ಮಾರುಹೋದೆವಲ್ಲ। ಸಾರವನ್ನು ಕಂಡು ಪ್ರಭುವನು ಬೇರೆ ಭಜಿಸಲಿಲ್ಲ।।1।। ಯಾರ ಸೇವೆಯಲ್ಲೊ, ಕಳೆದು ಶರೀರ ಸವೆಯಿತಲ್ಲ। ಭಾರ್ಯೆ ಬಂಧುಮೋಹ ಮನವನು ಮೀರಿ ತಣಿಸಿತಲ್ಲ।।2।। ವೇದ ಬ್ರಹ್ಮ ಸೂತ್ರ, ಗೀತೆಯನೋದಿ ತಿಳಿಯಲಿಲ್ಲ। ಸಾಧನೆಯನು ಗೈಯೆ, ಕಿಂಚಿತ್ ಸಾಧ್ಯವಾಗಲಿಲ್ಲ।।3।। ಏನು ಗುರಿಯು ಎನ್ ಅರಿವೇ ತಾನೆ ಬೆಳೆಯಲಿಲ್ಲ। ಧ್ಯಾನದಲ್ಲಿ ನಿಂತು, ಚಿತ್ತವ ಲೀನಗೊಳಿಸಲಿಲ್ಲ।।4।। ಮೇಳ ತಪ್ಪಿದೊಂದು, ಗೀತವು। ಬಾಳಿದಾಯ್ತು ದಿಟವು। ಕಾಲ ಮೀರದಂತೆ, ಗೋಪನ ಬಾಳತಿದ್ದಿ ನಡೆಸೋ।।5।।

**ದೇವ2 ಸದ್ಗುರು ದೇವ ಸುಧೀಂದ್ರ**

ದೇವ ದೇವ ಸದ್ಗುರು ದೇವ। ಸುಧೀಂದ್ರ ತೀರ್ಥ ಪಾಹಿಮಾಂ। ಚಂದ್ರವದನ ಮಂದಹಾಸ ಪ್ರೇಮರೂಪ ರಕ್ಷಮಾಂ।।1।। ಮಧುರ ಗೀತ ಗಾನಲೋಲ ಜ್ಞಾನರೂಪ ಪಾಹಿಮಾಂ। ಸಮಸ್ತ ಲೋಕ ಪೂಜಿತಾಯ ಮೋಹನಾಂಗ ರಕ್ಷಮಾಂ।।2।। ಭಕ್ತಲೋಕ ಹೃದಯವಾಸ ಸ್ವಾಮೀನಾಥಾ ಪಾಹಿಮಾಂ। ಪಾಪಹರಣ ಪುಣ್ಯಶೀಲ ಪರಮ ಪುರುಷ ರಕ್ಷಮಾಂ।।3।। ದಿವ್ಯ ಕಾಶೀ ಮಠ ವಾಸಿ ಸ್ವಾಮೀನಾಥಾ ಪಾಹಿಮಾಂ। ಶ್ರೀ ಸ್ವರೂಪ ಚಿದಾನಂದ ವ್ಯಾಸ ರಘುಪತಿ ರಕ್ಷಮಾಂ।।4।। ಸದ್ಗುರು ಜಯ ಸದ್ಗುರು ಜಯ ಸದ್ಗುರು ಜಯ ಪಾಹಿಮಾಂ ರಕ್ಷಮಾಂ।।

**ನಮೋ ಪರಾತ್ಪರ ಜ್ಞಾನದಾತ** **ರಾಗ:ಶಿವರಂಜಿನಿ, ಆದಿತಾಳ**

ನಮೋ ಪರಾತ್ಪರ ಜ್ಞಾನದಾತ ಗುರು। ನಮಾಮಿ ಶ್ರೀ ಗುರು ಓಂಕಾರೋ ಗುರು॥ಪ॥ ಚಿದಾನಂದ ಚಿತ್ ಸ್ವರೂಪ ಗುರು। ಸದಾನಂದ ವರದೇಹಿ ಪರಮಗುರು। ನಮೋ ನಮೋ ಹೇ ಸರ್ವದುಃಖಹರ। ನಮಾಮಿ ಬ್ರಹ್ಮ ವಿಷ್ಣು ಮಹೇಶ್ವರ॥1॥ ಮೋಕ್ಷದಾತಗುರು ನಮೋ ನಮಸ್ತೇ। ರಕ್ಷರಕ್ಷಮಾ ಜ್ಞಾನ ಮೂರುತೇ। ಅವಗುಣ ಹರಣ ಕರುಣಾ ಭರಣ। ಭವಭಯಹರಣ ತವ ಶರಣ॥2॥ **ರಾಘವೇಂದ್ರ ರಾಯರು॥**

**ನಿನ್ನ ನೆರೆ ನಂಬಿದೆನೊ**

ನಿನ್ನ ನೆರೆ ನಂಬಿದೆನೊ। ಸನ್ನುತಾ ಚರಿತಾ। ಸಾಂದ್ರಗುಣಯುತನೇ। ಶ್ರೀ ಚಂದ್ರಶೇಖರ। ಗುರುವೇ॥ ...॥ಪ॥ ಕರ್ಮಯೋಗಿಯೆ ವೇದ। ಧರ್ಮಪರಿಪಾಲಕನೇ। ನಿರ್ಮಲಾ ಹೃದಯ ಸದ್ಧರ್ಮವೋ ಪೋಷಕನೇ। ಶೃಂಗಗಿರಿವಾಸನೇ। ಮಂಗಳಾಚರಿತಾನೇ। ಶೃಂಗ ಮಹಿಮನೆ ಯೋಗಿ। ಪುಂಗವನು ಹೇಗುರೋ॥1॥ ಕಾಶಾಯಾಂಬರಧಾರೀ। ಭಾವಕ್ಲೇಶ ಪರಿಹಾರಿ ಆಶಲೇಸಗಳಿಲ್ಲದಾ। ಜ್ಞಾನ ಲೋಕವಿಹಾರೀ। ಪರಮಮಂಗಳಮೂರ್ತಿ ಮೆರೆಯುತಿದೆ ತವ ಕೀರ್ತಿ। ಕರುಣಿಸೈ ಅನುದಿನವೂ। ದರುಶನದ ಭಾಗ್ಯವನೂ॥2॥ ಹೇ ಜ್ಞಾನ ಸಾಗರನೇ। ಹೇ ಜ್ಞಾನ ಶೋಭಿತನೇ। ಹೇ ಮಹಾಜಲನಿಧಿಯೇ। ಎಲೆ ಮಹಾಮಹಿಮನೇ ಸೇರಿದೆನು। ತವಪಾದ। ತೋರುದಯವನು ಗುರುವೇ। ಪಾರುಗಾಣಿಸೊಭವದ ವಾರುಧಿಯ ದಾಟಿಸುತಾ॥3॥ ನಿನ್ನಯ ನೆರೆನಂಬಿದೆನೊ। ಸನ್ನುತಾ ಚರಿತಾ। ಸಾಂದ್ರಗುಣಯುತನೇ ಶ್ರೀ ಚಂದ್ರಶೇಕರನೇ ಗುರುವೇ॥4॥

**ನುಡಿದು ಬೇಸತ್ತಾಗ** **ರಾಗ: ಮೋಹನ, ರೂಪಕತಾಳ**

ನುಡಿದು ಬೇಸತ್ತಾಗ। ದುಡಿದು ಸತ್ತಾಗ। ಜನಕ ಹಿಗ್ಗಿನ ಹಾಡು ನೀಡಾಂವಾ। ನಿನ್ಹಾಂಗ ಆಡಾಕ। ನಿನ್ಹಂಗ ಹಾಡಾಕ। ಪಡೆದು ಬಂದವ ಬೇಕೋ ಗುರುದೇವಾ॥1॥ ಮಕ್ಕಳಿಗಾಗ್ಯಾಡೀದಿ ಹಕ್ಕ್ಯಾಗಿ ಹಾಡೀದಿ। ಚಿಕ್ಯಾಗಿ ನೋಡಿದಿ ಗುರುದೇವಾ। ಬಳ್ಳಾಗಿ ಕುಣಿದೀದಿ ಬೆಳಕಿನ್ಯಾಗ ತಣಿದೀದಿ। ಹೂವಾಗಿ ಅರಳೀದಿ ಗುರುದೇವಾ॥2॥ ಬೆಳಿಯಾಗೀಸಾಡೀದಿ। ಗಳ್ಯಾಗ ಬೀಸಾಡೀದಿ। ಮಳಿಯಾಗ ಕೋಸಾಡೀದಿ। ಗುರುದೇವಾ। ಬಿಸಿಲ್ಹಣ್ಣು ಉಂಡೀದಿ ಬೆಳದಿಂಗಳ ಕಂಡೀದಿ। ಚಳಿಮುದ್ದು ಕೊಂಡೀದಿ ಗುರುದೇವ॥3॥ ಮೂಡಲಕ ಮೂಡೀದಿ। ಪಡುವಲಕ ಓಡೀದಿ। ದಿಕ್ಕೆಲ್ಲ ಕೂಡೀದಿ। ಗುರುದೇವಾ। ಹಾಡಿ ಕಣ್ಣಾದಿ ನೀ ಜಗದ ಕಣ್ಣಾದಿನೀ। ದುಡಿದು ಸಣ್ಣಾದಿ ನೀ ಗುರುದೇವಾ॥4॥

**ಪರಮ ತತ್ವಾರ್ಥವನು ಅರಿಯದಲೆ** **ರಾಗ: ರೇವತಿ, ಛಾಪುತಾಳ**

ಪರಮ ತತ್ವಾರ್ಥವನು ಅರಿಯದಲೆ ನಾನು। ಪರಿ ಪರಿ ವಿಧದಲ್ಲಿ ಬಳಲುತಿದ್ದೆ। ಘೋರ ಸಂಸಾರದಲಿ ಪಾರುಗಾಣದೆ। ಮನ ಬಾರಿಬಾರಿಗು ಗುರುವನರಸುತಿದ್ದೇ। ಗುರುವಿನ ಕರುಣೆಯು ದೊರಕಿತೆನಗೆ। ಪರಿಪರಿ ಭೋದೆಯನು ತುಂಬೆ। ಮನಕೆ ಸ್ಥಿರವಾದ ಜ್ಞಾನವುದಯಿಸಿತೆನ್ನ ಮನಕೆ। ಸದ್ಗುರುವಿನ ಕೃಪೆಯಿಂದ ಎನಗೇ॥

**ಬನ್ನಿ ಎಲ್ಲಾ ಕೂಡಿ ನಾವು** **ರಾಗ:ಶಂಕರಾಭರಣನೋಟ್ಸ್**

ಬನ್ನಿ ಎಲ್ಲಾ ಕೂಡಿ ನಾವು ದೇವ ಧ್ಯಾನ ಮಾಡುವಾ। ಭಕ್ತಿಯಿಂದ ಎಲ್ಲ ಸೇರಿ ನಿತ್ಯ ಸ್ತುತಿಸುವಾ। ಗುರುವು ನಮ್ಮ ತಾಯಿ ತಂದೆ ಎಂದು ತಿಳಿಯುತಾ। ವಿನಯದಿಂದ ಶ್ರದ್ಧೆ ವಹಿಸಿ ವಿದ್ಯೆ ಕಲಿಯುವಾ॥1॥ ಬುದ್ಧಿ ಶಕ್ತಿ ನೀಡಿ ನಮಗೆ ದಾರಿ ತೋರುವಾ। ಮಹಿಮನನ್ನು ಸ್ತುತಿಸುತ್ತಾ ನಿತ್ಯ ಬಾಳುವಾ। ಓದು ಬರಹ ಕಲಿತು ಎಂದೂ ಬುದ್ಧಿವಂತರಾಗುತಾ। ನೀತಿ ನಿಯಮ ಪಾಲಿಸುತ ಒಳ್ಳೆ ಕೀರ್ತಿ ಪಡೆಯುವಾ॥2॥ ಮಕ್ಕಳೆಲ್ಲ ದೇವರೆಂದು ತಿಳಿದುಕೊಳ್ಳುತಾ। ಒಳ್ಳೆ ನಡತೆ ಘನಕೆ ಕಲಿಸಿ ಮುನ್ನಡೆಸುವಾ। ರಾಗ ದ್ವೇಷ ಶಮನಮಾಡಿ ಪ್ರೀತಿ ತುಂಬುತಾ। ಭವ್ಯನಾಡ ಕೀರ್ತಿಯನ್ನು ಜಗತೆ ಸಾರುವಾ॥3॥

ಧರ್ಮಗ್ರಂಥ ಇತಿಹಾಸ ಸಾರಿ ಹೇಳುತಾ। ಮನುಕುಲದ ದಿವ್ಯ ಹೆಸರ ನಾವು ಉಳಿಸುವಾ। ಎಲ್ಲರಲ್ಲಿ ಸ್ನೇಹ ಬೆಳೆಸಿ ಶಾಂತಿ ಬೆಳಸುತಾ। ಎಲ್ಲ ಕಾಲದಲ್ಲೂ ನಾವು ಶ್ರೀ ಪೂಜ್ಯರಾಗುವಾ॥4॥

## ಮಕ್ಕಳ ಹೃದಯದ ನಂದನ ವನದಿ — ರಾಗ: ತಿಲಂಗ್

ಮಕ್ಕಳ ಹೃದಯದ ನಂದನ ವನದಿ ಜ್ಞಾನದ ಹೂಗಳ ಅರಳಿಸುವವರು। ಏಳುಬೀಳು ನೂರೆಂಟು ಗೋಳುಗಳ ಲೆಖ್ಖಕೆ ತಾರದೆ ಮುನ್ನಡೆವವರು (ಶಿಕ್ಷಕರು ಅವರೇ)॥1॥ ಪ್ರೀತಿ ಮಮತೆಗಳ ಮುತ್ತುಗಳನ್ನಿತ್ತು। ಬಾಳಿಗೆ ಆಗುವರಾಧಾರ। ನೀತಿನಿಯಮಗಳ ಖ್ಯಾತಿಯ ಕುವರರು। ಭೀತಿಯ ಮರೆಸುವ ಧೀರರು॥2॥ ಶಿಕ್ಷಕರೆಂದರೆ ನಾಡಿನ ಕಣ್ಗಳು। ಧನ್ಯ ಧನ್ಯ ಅವರ್ ತುಳಿದಿಹ ಮಣ್ಣು। ತೋರುವರವರೆ ಬೆಳಕಿನ ದಾರಿ। ಈ ಭೂಲೋಕದ ನಿತ್ಯ ಮುರಾರಿ॥3॥ ಅರಿವಿನ ಬಾಗಿಲು ತೆರೆಯುವ ಭಾವ। ಕಾಡದ ಬೇಡದ ಬಾಡದ ಜೀವ। ಅಂತೆಯೆ ಹಿರಿಯರು ಸಾರಿದರಿಂತು। ಗುರುವೆ ಮುನಿದರೆ ಕಾಯುವ ನಾವ॥4॥ ಉನ್ನತ ಗುರಿಯ ತೋರುವ ಗುರುವೆ। ಬಾಳಿಗೆ ಬೆಳಕಿನ ಕಿಡಿಯು। ಗುರುವಿನ ಸನ್ನಿಧಿ ಸಿಕ್ಕದ ಬದುಕು। ದೇವರೆ ಇಲ್ಲದ ಗುಡಿಯು॥5॥ ಎನಿತೇ ಬಂದರು ಹೊಸಹೊಸ ಯಂತ್ರ। ಬೇಕೇ ಬೇಕು ಗುರು ಮಂತ್ರ। ಉಚ್ಛವಿಚಾರದ ಸರಳ ಜೀವಿಯಿವ। ರಾಷ್ಟ್ರದ ಪ್ರಗತಿಗೆ ನಿಜ ಸೂತ್ರ॥6॥ ನಾಡಿನ ನಾಡಿಯೆ ಸುಂದರ ಶಿಲ್ಪಿಯೆ। ಜಗಕೆಲ್ಲಿದೆ ನಿನ್ನೆಡೆ ಗಮನ? ಸುಖಸಂಪದಗಳ ಹಿರಿಪದ ಬಯಸದ। ಶಿಕ್ಷಕರಿಗೆ ಸಾವಿರ ನಮನ॥7॥

## ಮಹಿಮೆ ಸಾಲದೇ ಇಷ್ಟೇ ಮಹಿಮೆ — ರಾಗ: ಹಂಸನಾದ

ಮಹಿಮೆ ಸಾಲದೇ ಇಷ್ಟೇ ಮಹಿಮೆ ಸಾಲದೆ॥ಪ॥ ಅಹಿಶಯನನ ಒಲುಮೆಯಿಂದ ಮಹಿಮೆಯೊಳೆಮ್ಮ। ಶ್ರೀಪಾದರಾಜರ॥ಅ.ಪ.॥ ಮುತ್ತಿನ ಕವಚ ಮೇಲ್ ಕುಲಾವಿ ನವರತ್ನ ಕೆತ್ತಿದ ಕರ್ಣಕುಂಡಲ ಕಸ್ತೂರಿ। ತಿಲಕ ಶ್ರೀಗಂಧಲೇಪನ ವಿಸ್ತಾರದಿಂದ ಮೆರೆದು ಬರುವ॥1॥ ವಿಪ್ರಹತ್ಯ ದೋಷ ಬರಲು ಕ್ಷಿಪ್ರ ಶಂಕೋದಕದಿ ಕಳೆಯೆ ಅಪ್ರಬುದ್ಧರು ದೋಷಿಸೆ ಗೇರೆಣ್ಣೆ ಕಪ್ಪವಸನ ಹಸನ ಮಾಡಿದ॥2॥ ಹರಿಗೆ ಸಮರ್ಪಿಸಿದ ನಾನಾ ಪರಿಯ ಶಾಕಂಗಳನು ಭುಂಜಿಸೆ। ನರರು ನಗಲು ಶ್ರೀಶ ಶ್ರೀಕೃಷ್ಣನ ಕರುಣದಿಂದ ಹುಸಿಯ ಮಾಡಿದ॥3॥

## ವಿದ್ಯೆಗೆ ಎಂದೂ ಶಿಕ್ಷಕ ತಾನೆ — ರಾಗ:ಶಿವರಂಜಿನಿ

ವಿದ್ಯೆಗೆ ಎಂದೂ ಶಿಕ್ಷಕ ತಾನೆ ಜನ್ಮದಾತನು। ಶಿಕ್ಷಕನಿಲ್ಲದ ವಿದ್ಯೆ ಯಾವುದೂ ಸಫಲವಾಗದೂ। ಅಕ್ಷರ ಕಲಿಸಿದ ಗುರುವನ್ನು ಎಂದೂ ಮರೆಯಲಾಗದು। ಎಂದೂ ಮರೆಯಲಾಗದು॥1॥ ಶಾಲೆಗೆ ಬಂದೊಡೆ ಮನೆಯ ಚಿಂತೆಯ ದೂರವಿಡುವರು। ಮನೆಯ ತೊಂದರೆ ಎಷ್ಟೇ ಇರಲಿ ಎಲ್ಲ ಮರೆವರು। ಮಕ್ಕಳ ಜೊತೆಯಲಿ ಸರಸವಾಡುತ ಕಷ್ಟ ಮರೆವರೂ॥2॥ ಬಡವನೆ ಇರಲಿ ಬಲ್ಲಿದನಿರಲಿ ಭೇದ ತೋರರು। ಬಡವ ಬಲ್ಲಿದ ಇಬ್ಬರಿಗೂ ಪಾಠ ಹೇಳ್ವರು। ಅವರು ಪಾಠ ಹೇಳ್ವರು॥3॥

## ಶಿಕ್ಷಕನಾದರು ವಿದ್ಯೆಗೆ ತಾನು — ರಾಗ: ಅಮೃತವರ್ಷಿಣಿ

ಶಿಕ್ಷಕನಾದರು ವಿದ್ಯೆಗೆ ತಾನು ಮೂಲಧಾತನು। ಶಿಕ್ಷಕನಿಲ್ಲದ ವಿದ್ಯೆಯು ತಾನದು ಸಫಲವಾಗದು। ಮೂಲ ಶಿಕ್ಷಣದ ಗುರುವನು ಯಾರೂ ಮರೆಯಲಾರರು॥ಪ॥ ಶಾಲೆಗೆ ಬಂದೊಡೆ ಮನೆಯ ಚಿಂತೆಯ ದೂರಮಾಡ್ವನು। ಮಕ್ಕಳ ಜೊತೆಯಲಿ ಸರಸವಾಡುತ ಕಷ್ಟ ಮರೆವನು। ಮುದ್ದಿನ ಮಕ್ಕಳ ತೊದಲ ನುಡಿಗೆ ಮನ ಸೋಲುವನು॥1॥ ಬಡವನೆ ಬರಲಿ ಬಲ್ಲಿದ ಬರಲಿ ಭೇದ ತೋರನು। ಜಾತಿ ಮತಗಳ ಎಣಿಸದೆ ಬೋಧೆ ಮಾಳ್ಪನು। ಸರ್ವರು ಒಂದೇ ಎನ್ನುತ ಪಾಠ ಹೇಳ್ವನು॥2॥ ರೂಸೋ ಮಾಂಟಿಸೋರಿ ಗಾಂಧಿ ಮಹಾತ್ಮರ ಜಾಡ ಹಿಡಿವನು। ನಿತ್ಯವೂ ಟಿಪ್ಪಣಿ ಬರೆಯದೆ ಎಂದೂ ಶಾಲೆಗೆ ಹೋಗನು। ಮಕ್ಕಳ ಶ್ರೇಯೋಭಿವೃದ್ಧಿಯ ಕಂಡು ಹೆಮ್ಮೆಯ ಪಡುವವನು॥3॥

**ಶೀತಲ ಚರಣಂ ಕೋಮಲ ಚರಣಂ (ಹಿಂದಿ)** **ರಾಗ: ಕಲ್ಯಾಣಿ**

ಶೀತಲ ಚರಣಂ ಕೋಮಲ ಚರಣಂ। ಮಂಜುಲ ಚರಣಂ, ಮಮಗುರು ಚರಣಂ।। ಮೃದುಲ ಚರಣಂ ಅನುಗ್ರಹ ಚರಣಂ। ಸದ್ಗುರು ಚರಣಂ ಸದಾ ಭಜಾಮಿ.... ....।।1।। ಪ್ರೇಮದಾತಾ ಪ್ರಾಣನಾಥಾ। ಪ್ರಾಣನಾಥಾ ಸದ್ಗುರು ನಾಥಾ। ಸದ್ಗುರು ಚರಣಂ। ಸದಾ ಭಜಾಮಿ।।2।।

**ಹೇ ಗುರುವೇ ಜ್ಞಾನದಾತನೆ ಸಾಷ್ಟಾಂಗ** **ರಾಗ: ಧರ್ಮವತಿ**

ಹೇ ಗುರುವೇ ಜ್ಞಾನದಾತನೆ ಸಾಷ್ಟಾಂಗ ವಂದನೆ। ಎಲ್ಲರಾ ಮನ ಬೆಳಗುವಂಥ ಚೈತನ್ಯ ದಾತನೇ।।ಪ।। ಕತ್ತಲಲ್ಲಿ ಸಿಲುಕಿದೆ ಬಳಲಿ ಬೆಂಡಾದೆ। ನಿನ್ನ ಚೈತನ್ಯದ ಅರಿವಿನಿಂದಲೇ ನಿಂದೆ ಎಲ್ಲ ಜೀವಿಗಳಿಗೆ ನೀನೇ ಆಧಾರವಾಗಿಹೆ। ಸತ್ಯ ಸಂದನೆ ನಿತ್ಯರೂಪನೆ ಹೇ ಯೋಗಿ ವರ್ಯನೆ।।1।। ನಿನ್ನ ಅರಿಯುವ ಶಕ್ತಿಯ ನೀಡೆಮಗೆ ದಾತನೆ। ನಿನ್ನ ಸಾನಿಧ್ಯವ ನಿರುತ ನೀಡು ಜ್ಞಾನರೂಪನೆ। ಅಮರನಾಗಿ ಎಲ್ಲರಲ್ಲೂ ನವಸ್ಫೂರ್ತಿ ನೀಡಿಹೆ। ಚಂಚಲತೆಯ ಬಿಡಿಸಿ ಮನಕೆ ಧೈರ್ಯ ಸ್ಥೈರ್ಯವ ನೀಡಿಹೆ।।2।। ವಿಷಯಗಳಲಿ ಸಿಲುಕಿ ಮನವು ನಲುಗುತಿಹುದು ದೇವನೆ। ಅವುಗಳಾ ಮರ್ಮವರಿವ ಭಕ್ತಿ ಮಾರ್ಗವ ತೋರುನೀ। ಜ್ಞಾನ ಹಾದಿಯಲೆನ್ನ ನಡೆಸು ಹೇ ದೇವ ದೇವನೇ। ನಾನೇ ನನ್ನನೆ ಅರಿಯುವಂತ ಮತಿಯ ನೀಡು ದೇವನೆ।।3।।

## ಏಸು

**ಅತಿಶಯ ವರವಲ್ಲವೇ ಕರ್ತನಾ ದೇವಾ**

ಅತಿಶಯ ವರವಲ್ಲವೇ ಕರ್ತನಾ ದೇವಾ(3ಸಾರಿ) ಮಿತಿಇಲ್ಲದಾ ದೇವ ಸುತನು ರಕ್ಷಕನಾಗಿ ಕ್ಷಿತಿಯವರೆಲ್ಲರ್ಗೆಗತಿ ಯುಂಟುಮಾಡಿದ್ದು।।ಅತಿ।। ನರಕುಲದವರೆಲ್ಲರೂ ಪಾಪಾದಿಂದ ನರಕ ಪಾತ್ರರಾದರು। ಪಾಪದಿಂದ ನರಕ ಪಾತ್ರರಾದರು। ವರಮುಕ್ತಿ ಮಾರ್ಗವನರಿಯದೆ ಅಲೆಯಲು ಕರುಣೆಯಾದೇವನು ಪೊರೆಯೆ ಬಲಿಯಾದದ್ದು।।ಅತಿ।। ತೋರುವಖಿಳ ವಸ್ತುವು ಆಕಾಶದ ತಾರೆ ಚಂದ್ರನು ಸೂರ್ಯನು। ಆಕಾಶದ ತಾರೆ ಚಂದ್ರಸೂರ್ಯನು।। ಮೂರು ಲೋಕದೊಳಿಹ ಸಾರಸೃಷ್ಟಿಗಳೆಲ್ಲ ಈ ರಕ್ಷಕಗೆ ಸರಿ ಬಾರದು ಇದು ಸತ್ಯ।।ಅತಿ।। ಉತ್ತಮ ಭಾಗ್ಯಗಳ ಪೊಂದುವುದಕೆ ಎತ್ತ ಹೋದರು ಸಿಕ್ಕವು ಹೊಂದುವುದಕ್ಕೆ। ಎತ್ತ ಹೋದರು ಸಿಕ್ಕವು।। ನಿತ್ಯ ಜೀವಕ್ಕಾಗಿ ರಕ್ತ ಕ್ರಯವ ಕೊಟ್ಟು ಭಕ್ತರ ಬಾಳಿಸಲುತ್ಥಾನವಾದದ್ದು।।ಅತಿ।।

**ಕ್ರಿಸ್ತನ ನೆನೆ ಮನವೆ** **ರಾಗ: ನಾದನಾಮಕ್ರಿಯ, ಆದಿತಾಳ**

ಕ್ರಿಸ್ತನ ನೆನೆ ಮನವೆ ಅನುದಿನ ನೀ ಏಸು।।2ಸಾರಿ।। ಕ್ರಿಸ್ತನ ನೆನೆದರೆ ಪಾಪವು ಪರಿಹಾರ।।ಪ।। ಬೆತ್ತಲ್ ಹ್ಯಾಮಿನ ಕೊಟ್ಟಿಗೆಯೊಳಗೆ। ಮೇರಿಮಾತೆಯ ಉದರದಿ ಜನಿಸಿ। ನಮ್ಮಯ ಪಾಪವ ನೀ ಸ್ವೀಕರಿಸಿ। ಶಿಲುಬೆಗೆ ಏರಿದ ಮಹಾನುಭಾವ।।1।। ಮೂವರು ಕುರುಬರು ಶುಭತಾರೆಯ ನೋಡಿ। ಕ್ರಿಸ್ತನ ಅರಸಿದರು। ಏಸು ಕ್ರಿಸ್ತನ ಮಿತ್ರರು ದ್ರೋಹವ ಮಾಡಿ। ಅವನನೆ ಮುಗಿಸಿದರು।।2।।

**ಚಂದ್ರಕಾಂತಿ ಜ್ಯೋತಿಹೊಂದಿ** **ರಾಗ: ಶಂಕರಾಭರಣ-ನೋಟ್ಸ್**

ಚಂದ್ರಕಾಂತಿ ಜ್ಯೋತಿಹೊಂದಿ ಇಹಕೆ ಬಂದವನೆ। ವಿಮಲತಾಯಿ ಅಮಲಕನ್ನೆಗೆ ಹುಟ್ಟಿದ ದೇವನೆ। ವೀಣೆಯಲ್ಲು ನುಡಿಯದಂತ ಇಂಪು ಗಾನವೆ। ಎನ್ ನುಡಿಯಲಿ ನಿಂದಾಡುವಾ ಇಂಪು ಗೀತೆಯೆ।।1।। ಇಳೆಯು ನಿನ್ನ ಆಗಮನಕೆ ಕಾದು ನಿಂತಿತ್ತು। ನರಕದೊಡೆಯ ಛಲವತೊಟ್ಟು ಮೆರೆದು ನಿಂತಿದ್ದ। ಮಿನುಗುತಾರೆ ನೀ ಬರುವ ಸುದ್ದಿ ಸಾರಿತು। ಈ ಲೋಕದಲ್ಲಿಹ ಕಷ್ಟನೀಗಿ ಶಾಂತಿ ಸೇರಿತು।।2।। ದುಃಖ ನೆರೆದ ಧರಣಿಯಲ್ಲಿ ಭರದಿ ಜನಿಸಿದೆ। ಇಲ್ಲವೆಂದು ಬಾಳುವವಗೆ ಶಾಂತಿ ನೀಡಿದೆ। ಕೋರಿ ನಿಂತ ಪಾಪಿ ಎನಗೆ ದಯೆಯ ಪಾಲಿಸೊ। ಉರಿಸೊ ಎನ್ನ ಹೃದಯದಲ್ಲಿ ವರವ ಪಾಲಿಸೋ।।3।।

### ನನ್ನ ಕೊರಳ ಸ್ವರಕೆ ನಿಮ್ಮ ಧ್ವನಿಯ

ನನ್ನ ಕೊರಳ ಸ್ವರಕೆ ನಿಮ್ಮ ಧ್ವನಿಯ ತುಂಬಿ ಹಾಡುವೆ। ಏಸು ನಿಮ್ಮ ನಾಮವನ್ನು ಸಪ್ತ ಸ್ವರದಿ ಬೆರಸುವೆ।।ನನ್ನ।। ದೀನ ದಲಿತ ಮನೆಯ ಮಾತೆಯುದರದಿಂದ ಜನಿಸುವೆ। ಜಗದ ಶಾಂತಿಗಾಗಿ ನೀವು। ಪರರ ಹಿತದಿ ನಿನ್ನ ಒಳಿತು ಎಂದು ಜಗಕೆ ಸಾರುವೆ। ಶಾಪದಲ್ಲಿ ನೀವು ಅಲ್ಲಿ ಸ್ವರ್ಗ ದಾರಿ ಕಾಣುವೆ।।ನನ್ನ।।

### ಪತಿತಪಾವನ ಮೂರ್ತಿ ನೀನೇ

ಪತಿತಪಾವನ ಮೂರ್ತಿ ನೀನೇ ಏಸು ನೀನೇ ಏಸು ನೀನೇ।। ಭುವಿಯೊಳ್ ಸುಗುಣನಾಗಿ ಬಂದವ ನೀನೇ ಏಸು। ದೇವರೊಳ್ ಅನುಪಮ ಪರತರದ ನೀನೇ।।ನಿನ್ನಯ ಭಕ್ತರಿಂ ಸ್ತುತ್ಯನು ನೀನೇ। ಉನ್ನತ ಪ್ರಭು ಸತ್ಯಭಾವನು ನೀನೇ।।ಏಸು ನೀನೇ।।

### ಸಂತೋಷ ಉಕ್ಕುತ್ತೆ — ರಾಗ: ಶಂಕರಾಭರಣ-ನೋಟ್

ಸಂತೋಷ ಉಕ್ಕುತ್ತೆ ಸಂತೋಷ ಉಕ್ಕುತೆ। ಸಂತೋಷ ಉಕ್ಕೆ ಉಕ್ಕುತ್ತೆ। ಎಲ್ಲೆಲ್ಲಿಯು ಯೇಸು ನನ್ನ ರಕ್ಷಕ ನನ್ನ ಪಾಪವ ತೊಳೆವ। ಸಂತೋಷ ಉಕ್ಕೇ ಉಕ್ಕುತೇ।। ದಾರಿತಪ್ಪಿ ನಾ ನಡೆದೆ ಅದೇ। ದಾರಿಯಲ್ಲಿ ನಾ ಅಲೆದೆ। ಆದರೂ ಯೇಸು ಕೈಬಿಡದೆ। ತಾನೆ ಬಂದು ರಕ್ಷಿಸಿದ। ಇಂಥ ಒಳ್ಳೆಯ ಯೇಸು ನನ್ನ ಸ್ವಂತ ರಕ್ಷಕ ಹೋ.... ಹೋ.....।। ಪಾಪದಲ್ಲಿ ಇರುವವರು। ಪಾತಾಳದಲ್ಲಿ ಅಲೆಯುವರು। ನಾನು ಪರಲೋಕದಲ್ಲಿ ಹಾಡನೊಂದು ಹಾಡುವೆ। ಇಂಥ ಒಳ್ಳೆ ಯೇಸು ನನ್ನ ಸ್ವಂತ ರಕ್ಷಕ ಹೋ.... ಹೋ.....।।

## ಮಂಗಳ

### ಮಂಗಳಂ ಗುರು ಶ್ರೀ — ರಾಗ: ಶಂಕರಾಭರಣ-ನೋಟ್

ಮಂಗಳಂ ಗುರು ಶ್ರೀ ಚಂದ್ರಮೌಳೇಶ್ವರಗೆ। ಶಕ್ತಿ ಗಣಪತಿ ಶಾರದಾಂಬೆಗೆ ಶಂಕರಾಚಾರ್ಯರಿಗೆ।।ಪ।। ವಿದ್ಯಾರಣ್ಯರಿಗೆ। ವಿದ್ಯಾಶಂಕರಗೆ। ವಾಗೀಶ್ವರನಿಗೆ ವಜ್ರದೇಹ ಗರುಡಾಂಜನೇಯರಿಗೆ।।1।। ಕಾಲಭೈರವಗೆ ಕಾಳೀದುರ್ಗಿಗೆ। ವೀರಶೂರ ಧೀರ ಹನುಮ ಮಾರುತಿ ಚರಣಕ್ಕೆ।।2।। ಮಲ್ಲಿಕಾರ್ಜುನಗೆ ಚೆಲ್ವ ಜನಾರ್ದನಗೆ। ಅಂಬಾಭವಾನೀ ಕಂಬದ ಗಣಪತಿ ಚಂಡಿಚಾಮುಂಡಿಗೆ।।3।। ತುಂಗಭದ್ರೆಗೆ ಶೃಂಗವಾಸಳಿಗೆ। ಶೃಂಗೇರಿ ಪುರದೊಳು ನೆಲಸಿ ಇರುವ ಶಾರದಾಂಬೆಗೆ।।4।। ತತ್ವವೇತ್ತರಿಗೆ ಸತ್ಯಶೀಲರಿಗೆ। ಭಕ್ತಿಯಿಂದಲಿ ನಿತ್ಯವು ಬರುವ ಭಕ್ತವೃಂದಕ್ಕೆ।।5।।

# ಸರ್ವಧರ್ಮ ಪ್ರಾರ್ಥನಾ ಸ್ತುತಿ

### ಅಹಿಂಸಾ ಸತ್ಯ ಅಸ್ತೇಯ (ಏಕಾದಶವ್ರತ)

ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮ ಚರ್ಯ ಅಸಂಗ್ರಹ। ಶರೀರಶ್ರಮ ಅಸ್ವಾದ ಸರ್ವತ್ರ ಭಯವರ್ಜನ। ಸರ್ವಧರ್ಮೀ ಸಮಾನತ್ವ ಸ್ವದೇಶಿ ಸ್ಪರ್ಶಭಾವನಾ। ಹೀ ಏಕಾದಶ ಸೇವಾವೀ ನಮ್ರತ್ವೇ ವ್ರತನಿಶ್ಚಯೇ।।

### ಇತನಿ ಶಕ್ತಿ ಹಮೇ ದೇನಾ ದಾತ (ಹಿಂದಿ) — ರಾಗ: ಶುಭಪಂತುವರಾಳಿ

ಇತನಿ ಶಕ್ತಿ ಹಮೇ ದೇನಾ ದಾತಾ। ಮನಕಾವಿಶ್ವಾಸ್ ಕಮಜೋರ್ ಹೋನಾ। ಹಮ್ ಚಲೆನೇಕೆ ರಸ್ತೆಪೆ ಹಮ್‌ಸೆ। ಭೂಲಕರ್ ಭೀಕೋಯಿ ಭೂಲ್ ಹೋನಾ।।ಪ।। ಹರ್ ತರಫ್ ಜುಲ್ಮ ಹೈ ಬೇಬಸೀ ಹೈ। ಸಹಮಾ ಹಮಾ ಸಾ ಹರ್ ಆದ್‌ಮೀ ಹೈ। ಪಾಪಕಾ ಬೋಝ್ ಬಢತಾ ಹೀ ಜಾಯ್। ಜಾನೆ-ಕೈಸೆಯೆ ಧರತೀ ಥಮೀ ಹೈ। ಬೋಝ್